# ಕಲಾ

ವೈಚಾರಿಕ
ಸಾಹಿತ್ಯ-ಚಿತ್ರ
ಸಂಪುಟ 1










ಪದ್ಮಭೂಷಣ ಕೆ.ಜಿ. ಸುಬ್ರಹ್ಮಣ್ಯನ್ ಅವರ ಕಲಾಕೃತಿ
(ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಂಗ್ರಹ)

ರೇಖೆ–ಕಲಾವಿದನ
ಸಂವೇದನೆಯ ಹೃದಯ
ಬಡಿತವನ್ನು ಅನುಸರಿಸುವ
'ಕಾಲ'ದ ಚಲನೆ.

* * *

ರೇಖೆ–ಕಲಾವಿದನ
ಮನದ ಅಕಾರ, ದೇಶ
ಅವಕಾಶವನ್ನು
ಸೃಷ್ಟಿಸುವ ಕೇಂದ್ರ.

**ಡಾ. ಎಂ.ಎಸ್.ಮೂರ್ತಿ**







# ಕಲಾ

ವೈಚಾರಿಕ
ಸಾಹಿತ್ಯ – ಚಿತ್ರ
ಸಂಪುಟ 1

## ದೃಶ್ಯಕಲೆಯಲ್ಲಿ ರೇಖೆಗಳ ಮಹತ್ವ

ಪ್ರಧಾನ ಸಂಪಾದಕರು

**ಡಾ. ಎಂ.ಎಸ್. ಮೂರ್ತಿ**

ಸಂಪಾದಕರು

**ರಾಜು ಮಳವಳ್ಳಿ**








ಕರ್ನಾಟಕ ಸರ್ಕಾರ
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

# ಕಲಾ

**ವೈಚಾರಿಕ ಸಾಹಿತ್ಯ-ಚಿತ್ರ ಸಂಪುಟ 1**

## ದೃಶ್ಯಕಲೆಯಲ್ಲಿ ರೇಖೆಗಳ ಮಹತ್ವ

ಮೊದಲ ಮುದ್ರಣ : 2016
ಪ್ರತಿಗಳು : 1000
ಪುಟಗಳು : 116 + 4
ಪುಟ ವಿನ್ಯಾಸ : ಹರಿ
ಬೆಲೆ : ರೂ. **200/-**

ಪ್ರಕಟಣೆ
**ಹೆಚ್.ವಿ. ಇಂದ್ರಮ್ಮ**
ರಿಜಿಸ್ಟ್ರಾರ್
**ಕರ್ನಾಟಕ ಲಲಿತಕಲಾ ಅಕಾಡೆಮಿ**
ಕನ್ನಡ ಭವನ, ಎರಡನೇ ಮಹಡಿ
ಜೆ.ಸಿ. ರಸ್ತೆ, ಬೆಂಗಳೂರು-560 002
ದೂರವಾಣಿ : 080-22480297
ಈ-ಮೇಲ್ : kla.karnataka@gmail.com
www.lalitkalakarnataka.org / karnataka lalitha kala academy

**ಪ್ರಕಟಣಾ ಸಮಿತಿ**
ಎಸ್.ಜಿ.ವಾಸುದೇವ್
ಕೆ.ವಿ.ಸುಬ್ರಹ್ಮಣ್ಯಂ
ಡಾ. ಪ್ರಮೀಳಾ ಲೋಚನ
ಸಿ. ಚಿಕ್ಕಣ್ಣ
ರಾಜು ಮಳವಳ್ಳಿ

ಮುದ್ರಕರು
**ರೀಗಲ್ ಪ್ರಿಂಟ್ ಸರ್ವೀಸ್**
ಬೆಂಗಳೂರು-560 026
ದೂರವಾಣಿ : 99643 51655

# ಪ್ರಧಾನ ಸಂಪಾದಕರ ನುಡಿ

'ಕಲಾವಾರ್ತೆ' ಸಂಚಿಕೆಗಳು ಅಕಾಡೆಮಿಯ ಮಾಹಿತಿ-ಸುದ್ದಿಗಳಿಗೆ ಮೀಸಲಾದರೆ, 'ಕಲಾ' ವೈಚಾರಿಕ ಸಾಹಿತ್ಯ-ಚಿತ್ರ ಸಂಪುಟವು ಅಕಾಡೆಮಿಯ ಎಲ್ಲಾ ವಿಚಾರ ಸಂಕಿರಣಗಳ ಪ್ರಬಂಧಗಳ, ವಿಚಾರಗಳ, ಸಂವಾದಗಳ ದಾಖಲೆಯಾಗಿ ರಾಜ್ಯದ ಎಲ್ಲಾ ಕಲಾವಿದರಿಗೂ ತಲುಪಬೇಕೆಂಬ ಆಶಯ ನಮ್ಮದು.

ಮಡಿಕೇರಿಯಲ್ಲಿ ನಡೆದ **'ದೃಶ್ಯಕಲೆಯಲ್ಲಿ ರೇಖೆಗಳ ಮಹತ್ವ'** ಎಂಬ ಅಪರೂಪದ ವಿಷಯ ಕುರಿತು ವಿಚಾರಸಂಕಿರಣದಲ್ಲಿ ಭಾಗವಹಿಸಿದ ಕಲಾವಿದರು, ಸಂಶೋಧಕರು ಮತ್ತು ಕಲಾಚರಿತ್ರಕಾರರು ಮಂಡಿಸಿದ ಪ್ರಬಂಧ ಇಲ್ಲವೆ. ಇದರೊಂದಿಗೇ ವಿಚಾರ ಸಂಕಿರಣದಲ್ಲಿ 'ಸಂವಾದ'ಕ್ಕೆ ಆಹ್ವಾನಿತ ಕಲಾವಿದರ ಅಭಿಪ್ರಾಯಗಳು, ಕೆಲವು ಪ್ರಾತಿನಿಧಿಕ ರೇಖಾಚಿತ್ರಗಳು ಚರಿತ್ರೆಯ ದಾಖಲೆ ದೃಷ್ಟಿಯಿಂದ ಇಲ್ಲಿ ಪ್ರಕಟಿಸಲಾಗಿದೆ.

ರಾಜ್ಯದ ಒಂದು ಭಾಗದಲ್ಲಿ ನಡೆದ ವಿಚಾರಮಂಥನ, ಚರ್ಚೆಗಳು ಅಲ್ಲಿ ಭಾಗವಹಿಸ ಲಾಗದ ಇತರ ಕಲಾವಿದರಿಗೂ ತಲುಪುವಂತಾಗಲು 'ಕಲಾ' ಸಂಚಿಕೆ ಬಹಳ ಉಪಯುಕ್ತ. ಅದರಲ್ಲೂ ವಿಶೇಷವಾಗಿ ಈ ಸಂಚಿಕೆ 'ರೇಖೆ'ಗಳ ಕುರಿತ ವಿಚಾರಮಂಥನ ಕಲಾಶಿಕ್ಷಣದ ದೃಷ್ಟಿಯಿಂದ ಮಹತ್ವದ್ದು. ಈ ಮೂಲಕ ನಮ್ಮ ಕಲಾಮಾಧ್ಯಮದ ಸರಳ, ಪ್ರಾಥಮಿಕ ಅಭಿವ್ಯಕ್ತ ಮಾಧ್ಯಮವಾದ 'ರೇಖೆಗಳು' ಕಲಾವಿದ್ಯಾರ್ಥಿಗಳಿಗೂ, ಕಲಾಭ್ಯಾಸಿ ಗಳಿಗೂ ಮತ್ತು ಸಂಶೋಧಕರಿಗೂ ಗಮನಕ್ಕೆ ಬರುವಂತಾದರೆ ನಮ್ಮ ಈ ಶ್ರಮ ಸಾರ್ಥಕ.

ಮುಂದಿನ ಸಂಚಿಕೆಗಳು ಈಗಾಗಲೇ ಬೆಂಗಳೂರಿನಲ್ಲಿ ನಡೆದ 'ಕಲಾಚಿಂತನ' ಮತ್ತು ಧಾರವಾಡದಲ್ಲಿ ನಡೆದ 'ದೃಶ್ಯ ಕಲಾಶಿಕ್ಷಣ ಮತ್ತು ಸಂಶೋಧನೆ' ಹಾಗೇ ಮುಂದೆ ನಡೆಯಲಿರುವ 'ದೃಶ್ಯ ಕಲಾ ಸಾಹಿತ್ಯ-ವಿಮರ್ಶೆ' ಕುರಿತ ವಿಚಾರ ಸಂಕಿರಣಗಳ ಕುರಿತ ಸಮಗ್ರ ಸಂಪುಟಗಳು ಸದ್ಯದಲ್ಲೇ ನಿಮ್ಮ ಕೈಸೇರಲಿವೆ.

ಅಕಾಡೆಮಿಯ ಎಲ್ಲಾ ಕಾರ್ಯಕ್ರಮಗಳಿಗೆ ಸಹೃದಯಿ, ಸಕಾರಾತ್ಮಕ ನೆಲೆಯ ಎಲ್ಲಾ ಕಲಾವಿದರನ್ನು ಅಕಾಡೆಮಿ ಆಹ್ವಾನಿಸುತ್ತಾ ಕಲಾವಿದರೆಲ್ಲರಿಗೂ ಶುಭಕೋರುತ್ತೇನೆ.

**ಡಾ. ಎಂ.ಎಸ್.ಮೂರ್ತಿ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ

# ಪರಿವಿಡಿ


- ಪ್ರಧಾನ ಸಂಪಾದಕರ ನುಡಿ ... 3
- ಕರ್ನಾಟಕ ಪಾರಂಪರಿಕ ಚಿತ್ರಕಲೆಯಲ್ಲಿ ರೇಖೆಗಳ ಸ್ಥಾನ ... 5
  ♦ ಡಾ. ಆರ್.ಹೆಚ್ ಕುಲಕರ್ಣಿ
- ದೃಶ್ಯಕಲೆ ಮತ್ತು ರೇಖಾಚಿತ್ರದ ಆಯಾಮಗಳು ... 16
  ♦ ಕೆ.ವಿ.ಸುಬ್ರಹ್ಮಣ್ಯಂ
- ರೇಖಾಚಿತ್ರದ ಸೊಗಸು ಮತ್ತು ಮೌಲ್ಯ ... 27
  ♦ ರಾಜಶೇಖರ ಬಿಲ್ವಪತ್ರಿ
- ಆಧುನಿಕ ಕಲಾ ಸಂದರ್ಭದಲ್ಲಿ ರೇಖಾಚಿತ್ರಗಳ ಪ್ರಯೋಗಗಳು ... 34
  ♦ ಕಿರಣ್‌ಕುಮಾರ್ ಮಾಡಾಳು
- ಕರಾವಳಿಯ ಸಾಂಪ್ರದಾಯಿಕ ಕಲೆಗಳಲ್ಲಿ ರೇಖೆಗಳ ಮಹತ್ವ ... 45
  ♦ ಪುರುಷೋತ್ತಮ ಅಡ್ವೆ
- Linear Progressions: Tracing the Line in Karnataka ... 58
  ♦ *Nalini S Malaviya*
- ಮಾತನಾಡುವ ರೇಖೆಗಳು ... 72
  ♦ ಭಾಸ್ಕರ್ ನೆಲ್ಯಾಡಿ
- ರೇಖೆಗಳೇ ಜೀವಾಳ ... 73
  ♦ ಮೋಹನ ಹೆಚ್. ಸಿತನೂರು
- ರೇಖೆಗಳ ಸಂಯೋಜನೆಯೇ ಕಲಾಕೃತಿ ... 74
  ♦ ಮಂಜುನಾಥ್ ಕೆ.ಆರ್.
- ರೇಖಾಚಿತ್ರವೂ ಸಾಂದರ್ಭಿಕ ಚಿತ್ರವೇ ... 75
  ♦ ತಿರುಣಾವುಕ್ಕರಸು ಎಸ್.
- ಕಲಾಕೃತಿಗೆ 'ರೇಖೆ'ಯೇ ಜೀವ–ಆತ್ಮ ... 76
  ♦ ಎಫ್.ಎ. ಚಿಕ್ಕಮಠ
- ಚಿತ್ರಕಲಾವಿದನ 'ಸಹಿ' ... 77
  ♦ ಪ್ರೊ. ಅನಂತಪದ್ಮನಾಭ
- ಜೀವಂತಿಕೆಯ ಪ್ರತೀಕ ... 78
  ♦ ವಿಠ್ಠಲರೆಡ್ಡಿ ಚುಳಕಿ
- ಕೃತಿಯ ಅನಾವರಣದ ಮೂಲ ... 78
  ♦ ಬಾಗೂರು ಮಾರ್ಕಂಡೇಯ
- ಅಭಿಮತ ... 80
- ರೇಖಾಚಿತ್ರ ಸಂಪುಟ ... 83
- ಚಿತ್ರ ಸಂಪುಟ ... 113

# ಕರ್ನಾಟಕದ ಪಾರಂಪರಿಕ ಚಿತ್ರಕಲೆಯಲ್ಲಿ ರೇಖೆಗಳ ಸ್ಥಾನ

♦ ಡಾ. ಆರ್.ಎಚ್.ಕುಲಕರ್ಣಿ

ರೇಖಾ ಚಿತ್ರ-ಚಿತ್ರರಚನೆಯ ಹಾಗೂ ಕಲೆಯ ಜೀವಾಳ. ರೇಖೆಯಿಲ್ಲದೆ ಚಿತ್ರ ಒಂದರ ರಚನೆ ಸಾಧ್ಯವಾಗದು. ರೇಖಾಚಿತ್ರವು ಚಿತ್ರಕಲೆಯ ತಾಯಿ ಎಂಬ ವ್ಯಾಖ್ಯಾನಗಳು ಕಲೆಯ ಬೆಳವಣಿಗೆಯಲ್ಲಿ ಇಂದಿಗೂ ಪ್ರಚಲಿತದಲ್ಲಿವೆ ಹಾಗೂ ಒಪ್ಪಲಾಗಿದೆ ಕೂಡ.

ಸಹಜವಾಗಿ ಕಲಾವಿದನ ಪರಿಕಲ್ಪನೆಯಲ್ಲಿ ಹೊರಹೊಮ್ಮುವ ಕ್ರಿಯಾತ್ಮಕ ಚಿತ್ರಣವು ದೃಶ್ಯರೂಪಕ್ಕೆ ತರ್ಜುಮೆಗೊಂಡಾಗ ಮಾತ್ರವೇ ಅದರ ಪರಿಪೂರ್ಣವಾದ ಚಿತ್ರಣವು ಸಾಧ್ಯ. ಇದಕ್ಕೆ ಸಹಕಾರಿಯಾಗಿ ಮೂಲ ತಾಂತ್ರಿಕ ರೂಪವಾಗಿ ರೇಖೆಯ ಉಪಯೋಗ ಕಡ್ಡಾಯ ವಾಗಿರುತ್ತದೆ. ರೇಖೆಯ ಮೈವಳಿಕೆಗಳು ಸಂಯೋಜನೆಯೊಂದರ, ಆಕೃತಿಗಳೊಂದರ ಅಥವಾ ಒಟ್ಟಾರೆ ಚಿತ್ರಣದ ದೃಶ್ಯಚಿತ್ರಣವನ್ನು ಕಟ್ಟಿ ಕೊಡುತ್ತವೆ. ರೇಖೆಯು ಮೂರ್ತತೆಯಲ್ಲಿರಲಿ ಅಥವಾ ಅಮೂರ್ತತೆ ಯಲ್ಲಿರಲಿ ಅದರ ಅವಶ್ಯಕತೆಗನುಗುಣವಾಗಿ ಸಾಂಕೇತಿಕತೆಯನ್ನು

ಮತ್ತು ಅದರ ಸಾಧ್ಯಾಂತಗಳನ್ನು ಮೆರೆಯಬಲ್ಲದು. ರೇಖೆಯ ವಿಶ್ಲೇಷಣೆಯನ್ನು ಮಾಡಿದಾಗ-ವೈಜ್ಞಾನಿಕ ಹಿನ್ನೆಲೆಯಲ್ಲಿ-ಜ್ಯಾಮಿತಿಕ ಅರ್ಥದಲ್ಲಿ ಈ ಕೆಳಗಿನಂತೆ ವಿವರಿಸಬಹುದು. ಸಾಮಾನ್ಯವಾಗಿ ಎರಡು ಬಿಂದುಗಳ ಮಧ್ಯೆ ಇರುವುದೇ ರೇಖೆ ಅಥವಾ ಅಸಂಖ್ಯಾತ ಬಿಂದುಗಳಿಂದ ಹಿಮ್ಮುಕ ಅಥವಾ ಮುಮ್ಮುಖ ಚಾಲನೆಯಾಗಿರುವ ಸರಳ ಅಥವಾ ವಕ್ರವಾಗಿರುವ ಆಕೃತಿಯನ್ನು ರೇಖೆಯ ಪರಿವ್ಯಾಪ್ತಿಯಲ್ಲಿ ಗಮನಿಸಬಹುದು. ರೇಖೆಯನ್ನು ಸರಳ, ವಕ್ರ ಅಥವಾ ವೈವಿಧ್ಯಮಯವಾದ ಮೈವಳಿಕೆಯನ್ನು ಹೊಂದಿರುವ ರೇಖೆಯ ಔಪಯೋಗಿಕ ದೃಷ್ಟಿಕೋನವು ಸಾಕಷ್ಟು ವಿಶಾಲವಾಗಿದ್ದು. ಬಹುತೇಕವಾಗಿ ರೇಖೆಯ ಪ್ರತಿಯೊಂದು ಕಲಾತ್ಮಕ ಚಟುವಟಿಕೆಗಳ ಅವಿಭಾಜ್ಯ ಅಂಗವಾಗಿರುತ್ತದೆ. ರೇಖೆಯ ಪರಿವ್ಯಾಪ್ತಿಯಲ್ಲಿ ಹಲವಾರು ಅಂಗಗಳನ್ನು ಗುರುತಿಸಬಹುದು. ರೇಖೆಯು ತನ್ನ ಚಾಲನೆಯನ್ನು ಅತ್ಯಂತ ನವಿರಾಗಿ ಸಾರಾಗವಾಗಿ ಹಾಗೂ ಸುಲಲಿತವಾಗಿ ರಚನೆಯಾಗುತ್ತದೆ. ಅದರಲ್ಲಿ ವೃತ್ತ, ದೀರ್ಘವೃತ್ತ, ಚತುರಸ್ರ, ಆಯತ, ತ್ರಾಪಿಜಿಕ, ವೃತ್ತಾಯತ, ಖಂಡ, ತರಂಗ, ಸರ್ಪಾಕೃತಿ-ಸರಳ-ಲಂಬ, ತ್ರಿಕೋನ, ಷಟ್ಕೋನ ಹೀಗೆ ಹಲವಾರು ರೂಪಗಳ ಆಕೃತಿಗಳನ್ನು ರೇಖಾಕೃತಿಯಿಂದಲೇ ರಚಿಸಲಾಗುತ್ತದೆ. ಹೀಗಾಗಿ ರೇಖೆಯು ಪ್ರತಿಯೊಂದು ದೈನಂದಿನ ಕಲಾ ಚಟುವಟಿಕೆಯಲ್ಲಿ ಹಾಸುಹೊಕ್ಕಾಗಿದೆ.

ಭಾರತೀಯ ಕಲಾ ಇತಿಹಾಸ ಅದರಲ್ಲೂ ಕರ್ನಾಟಕದ ಕಲಾ ಇತಿಹಾಸವು ಚಿತ್ರಕಲೆಯ/ಕಲೆಯ ಬೆಳವಣಿಗೆಯನ್ನು ಸಾಕಷ್ಟು ವಸ್ತುನಿಷ್ಟವಾಗಿ ದಾಖಲು ಮಾಡಿದೆ. ಸಾಮಾನ್ಯವಾಗಿ ಪ್ರಾಗೈತಿಹಾಸಿಕ ಕಾಲದ ಕಲೆಯನ್ನು ಗಣನೆಗೆ ತಗೆದುಕೊಂಡು ಮಾತನಾಡಿದರೆ ಅಂದಿನ ಚಿತ್ರಗಳೆಲ್ಲವೂ ರೇಖೆಗಳಿಂದಲೇ ರಚನೆಯಾಗಿರುವುದು ಕಂಡುಬರುತ್ತವೆ. ಪ್ರಾಗೈತಿಹಾಸಿಕ ಕಾಲದ ಮಾನವನ ಕಲೆ ಚಿತ್ರಭಾಷೆಯ ಕಲೆ. ಏಕವರ್ಣವಿರಲಿ ಅಥವಾ ದ್ವಿ-ವರ್ಣವಿರಲಿ ಅದರ ರಚನೆಯು ರೇಖಾಪ್ರಧಾನವಾಗಿರುತ್ತದೆ. ಸಂಗನಕಲ್ಲು, ಮೊಸಳೆ ಗುಡ್ಡ, ಮಸ್ಕಿ, ಹಂಪಿ, ಬಾದಾಮಿ ಮೊದಲಾದ ಕಡೆಗಳಲ್ಲಿ ಕಂಡುಬಂದಿರುವ ಚಿತ್ರಗಳೆಲ್ಲವೂ ಬರ್ಂಟಸೈನಾ/ಕಂದು ಬಣ್ಣಗಳಿಂದ ಆಕೃತಿಗಳ ರೇಖಾಚಿತ್ರಗಳನ್ನು ರಚಿಸಲಾಗಿರುವುದು ಸ್ಪಷ್ಟವಾಗಿದೆ. ಆಕೃತಿಗಳನ್ನು ಪ್ರಾಯಶಃ ಅಂದಿನ ಪರಿಸರದಲ್ಲಿನ ಪ್ರಾಣಿ-ಪಕ್ಷಿಗಳು-ತಾವು ನೋಡಿದ್ದನ್ನು, ಅನುಭವಿಸಿದ್ದರ ಅನುಭವವನ್ನು ಚಿತ್ರಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಬೇಟೆಯ ದೃಶ್ಯ, ನೃತ್ಯದ ದೃಶ್ಯ ಹೀಗೆ ಹಲವಾರು ಸಾಮಾಜಿಕ-ದೈನಂದಿನ ರಚನೆಗಳನ್ನು ರೇಖೆಯ ಮೂಲಕವಾಗಿಯೇ ಚಿತ್ರಿಸಿದ್ದಾರೆ. ವಿಶೇಷವೆಂದರೆ ಆ ಕಾಲದ ಚಿತ್ರಕಲಾವಿದರ ಪರಿಕಲ್ಪನೆಯು ಅತ್ಯಂತ ಸೃಜನಾತ್ಮಕವಾದದ್ದು. ಉದಾಹರಣೆಗೆ ಪ್ರಾಣಿಯೊಂದರ ಗರ್ಭಾವಸ್ಥೆಯನ್ನು ಅದರ ಉದರದೊಳಗೆ ಮತ್ತೊಂದು ಕಿರಿದಾದ ಪ್ರಾಣಿಯನ್ನು ರಚಿಸುವುದರ

***ರೇಖಾಚಿತ್ರಣವು ಎಲ್ಲಾ ಕಲಾ ರಚನೆಯ ಜೀವಾಳ ಅಥವಾ ಮೂಲ ತಳಹದಿ. ಚಿತ್ರಕಲೆಯ ಅಭಿವೃದ್ಧಿಯಲ್ಲಿಯೂ ನಾವು ರೇಖಾಕೃತಿಯ ಬೆಳವಣಿಗೆಯನ್ನು ಗಮನಿಸಬಹುದು. ಯಾವುದೇ ಕಲಾಕೃತಿಯ ರಚನೆಗೆ ಮೂಲ ಸೆಲೆಯಾಗಿ ರೇಖಾಚಿತ್ರದ ರಚನೆಯಾಗಲೇಬೇಕು. ಇದನ್ನೆ 'ಕಾರ್ಟೂನಿಂಗ್' ಎನ್ನುವುದು ಅಥವಾ ಪಾರಂಪರಿಕ ಚಿತ್ರಕಲೆಯಲ್ಲಿ 'ತರಹ' ಎಂದು ಕರೆಯಾಲಾಗುತ್ತದೆ. ಇದನ್ನೆ ಸುಲ್ತಾನೇಟ್ ಚಿತ್ರಗಳಲ್ಲಿ 'ಕಲಮ್' ಎಂತಲೂ ಕರೆಯಲಾಗುತ್ತದೆ.***



ಮೂಲಕ ಬಿಂಬಿಸಿದ್ದಾರೆ. ಅದೇ ರೀತಿಯಾಗಿ ಇಂತಹ ಹಲವಾರು ಕೃತಿಗಳು ಕಂಡುಬರುತ್ತವೆ. ರೇಖೆಯೇ ಈ ಆಕೃತಿಗಳ ಜೀವಾಳ. ರೇಖೆಯ ಮೈವಳಿಕೆಯಿಂದಾಗಿ ಈ ಆಕೃತಿಗಳ ಆಕಾರಕ್ಕೊಂದು ಅರ್ಥಬಂದಿದೆ. ಆಕೃತಿಗಳ ರೂಪರೇಷೆಯನ್ನು ಪ್ರಚುರಪಡಿಸುವ ತೆರದಲ್ಲಿ ಈ ಚಿತ್ರಗಳು ರಚನೆಗೊಂಡಿವೆ. ವಿಶೇಷವೆಂದರೆ, ವಿಶ್ವದಾದ್ಯಂತ ಇರುವ ಪ್ರಾಗೈತಿಹಾಸಿಕ ಚಿತ್ರಕಲಾ ದಾಖಲೆಗಳೆಲ್ಲವು ರೇಖಾಕೃತಿಗಳೆ ಆಗಿವೆ. ಇದರಿಂದಾಗಿ ದೇಶ, ಕಾಲ, ಯಾವುದೂ ಗಣನೆಗೆ ಬಾರದೆ ರೇಖಾಚಿತ್ರ ಸರ್ವವ್ಯಾಪಿಯಾಗಿ, ಸರ್ವ ಕ್ರಿಯಾತ್ಮಕತೆಯ ಭಾಗವಾಗಿ ಅಭಿವೃದ್ಧಿಯಾಗಿದೆ.

ಒಂದು ಕಲಾಕೃತಿ–ಚಿತ್ರ ಅಥವಾ ಶಿಲ್ಪ ಕಲಾಕೃತಿಯಾಗಲಿ, ಅವುಗಳ ಮೂಲ ಪರಿಕಲ್ಪನೆಯನ್ನು ಮೂರ್ತರೂಪಕ್ಕೆ ತರಲು ಅಥವಾ ಪರಿವರ್ತಿಸಲು ರೇಖಾಕೃತಿ ಬೇಕೆ ಬೇಕು. ಸರ್ವಕಾಲಿಕವಾಗಿ, ಸರ್ವ ವ್ಯಾಪಿಯಾಗಿ ಒಂದು ಕ್ರಿಯಾತ್ಮಕ ಸಂವೇದನೆಯನ್ನು ಯಾವುದೇ ಗ್ರಾಫಿಕ್ (ಬರವಣಿಗೆಯ /ಚಿತ್ರಣಗಳ ಸಾಧ್ಯತೆಗಳ) ಮಾಧ್ಯಮದಲ್ಲಿ ಮೂಡಿಸಲು ರೇಖೆಯನ್ನು ಅನುಸರಿಸಲೇಬೇಕು. ಮೇಲೆ ಸ್ಥೂಲವಾಗಿ ಚರ್ಚಿಸಿದಂತೆ ಪ್ರಾಚೀನ ಹಿನ್ನೆಲೆಯಲ್ಲಿನ–ಪ್ರಾಗೈತಿಹಾಸಿಕ ಚಿತ್ರಗಳನ್ನು ಗಮನಿಸಿದಾಗ, ರೇಖಾ ಪ್ರಧಾನವಾದ ಆಕೃತಿಗಳನ್ನು ನೋಡುತ್ತೇವೆ, ಆಕೃತಿಯನ್ನು ರೇಖೆಯಲ್ಲಿ ರಚಿಸಿದಾಗ ಅದರ ವಿನ್ಯಾಸಕ್ಕೆ ಘನತ್ವವನ್ನು ನೀಡುವಂತಹ ಪ್ರಯತ್ನವನ್ನೂ ನೋಡುತ್ತೇವೆ. ಅಂದರೆ ಆಕೃತಿಯನ್ನು ರೇಖೆಯಲ್ಲಿ ಬಿಂಬಿಸಿದಾಗ ಅದರ ಮೈಮಾಟದ ಮತ್ತು ಇರುವಿಕೆಯ ಗುರುತು ಸ್ಪಷ್ಟವಾಗುತ್ತದೆ. ಅದಕ್ಕೊಂದು ಅನ್ವರ್ಥವೂ ಹುಟ್ಟಿಕೊಳ್ಳುತ್ತದೆ.

ಪ್ರಾಗೈತಿಹಾಸಿಕ ಮಾನವನ ಕಲ್ಪನೆಯಲ್ಲಿ ಪ್ರಾಣಿಯ ಚಿತ್ರಣವು ಅಥವಾ ರೇಖಾ ಕೃತಿಯಾಗಿ ಕಾಣುವ ಮನುಷ್ಯನ ಚಿತ್ರಗಳು–ಒಂದು ನಿರ್ದಿಷ್ಟ ಅರ್ಥವನ್ನು ಕಟ್ಟಿಕೊಡುವಂತಿವೆ. ಇಲ್ಲಿ ಅದೊಂದು ಪ್ರಾಣಿ ಅಥವಾ ಬೇಟೆಯ ದೃಶ್ಯವಾಗಿರಬಹುದು. ವಾಸ್ತವವಾಗಿ ಇಡೀ ಚಿತ್ರಣವು

*ಕಲೆಯನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವಲ್ಲಿ ಕಲಾ ಶಾಲೆಗಳ ಪಾತ್ರ ಹಿರಿದಾದದು. ಕಲಾ ಶಾಲೆಗಳಲ್ಲಿ ಸೇರುವ ವಿದ್ಯಾರ್ಥಿಗೆ ಮೊದಲು ಅಕ್ಷರಾಭ್ಯಾಸದ ರೀತಿಯಲ್ಲಿ ಹೇಳಿಕೊಡುವುದು ರೇಖಾಚಿತ್ರದ ಮೂಲ ಮಂತ್ರಗಳನ್ನು. ಅವುಗಳನ್ನು ಹಸ್ತಗತ ಮಾಡಿಕೊಂಡ ವಿದ್ಯಾರ್ಥಿ ನಿಧಾನವಾಗಿ ಮತ್ತು ಕ್ರಮವಾಗಿ ಚಿತ್ರಕಲೆಯ ವಿವಿಧ ಆಯಾಮಗಳನ್ನು ಅಧ್ಯಯನ ಮಾಡುತ್ತಾನೆ. ಪ್ರಾಯಶಃ ರೇಖಾಚಿತ್ರದ ಸೊಗಡು ಇಲ್ಲದವ ಕಲಾವಿದನಾಗಲು ಸಾಧ್ಯವೇ ಇಲ್ಲ ಎಂಬುದು ನಾಣ್ಣುಡಿಯಂತಾಗಿದೆ.*

ಅಂದಿನ ಜನಜೀವನದ ಮುಖ್ಯವಾದ ಘಟ್ಟವನ್ನು ಬಿಂಬಿಸುತ್ತದೆ, ಅದಕ್ಕೊಂದು ಸಾಮಾಜಿಕ ಹಿನ್ನೆಲೆ ಮತ್ತು ಜೀವನದ ನಾಡಿಯಂತಿರುವ ಅವಶ್ಯಕತೆಯನ್ನು ಬಿಂಬಿಸುತ್ತದೆ. ಕೇವಲ ಮನೋರಂಜನೆಯ ದೃಷ್ಟಿಯಿಂದ ಪ್ರಾಗೈತಿಹಾಸಿಕ ರೇಖಾಚಿತ್ರಗಳನ್ನು ನೋಡದೆ ಜೀವನದ ಅವಶ್ಯಕತೆಯನ್ನು ದಾಖಲಿಸುವ ಐತಿಹಾಸಿಕ ಚಿತ್ರಣವೂ ಆಗುತ್ತದೆ.

ರೇಖೆಯ ಮೈವಳಿಕೆಯಿಂದಾಗಿ ಅದರ ವಿವಿಧ ಛಾಯೆಗಳಿಂದಾಗಿ ರೇಖೆಯಲ್ಲಿನ ವೈವಿಧ್ಯವನ್ನು ನೋಡಬಹುದು. ಪ್ರಾಚೀನ ಸಾಮಾಜಿಕ ಅಭಿವೃದ್ಧಿಯ ಸಂಕೇತವಾದ ಸಿಂಧು ನದಿ ಕೊಳ್ಳದ ಹರಪ್ಪ-ಮಹೆಂಜೋದಾರೋ ಸಂಸ್ಕೃತಿಯ ಜನಕ್ಕೆ ಪ್ರಾಯಶಃ ಸಾಕಷ್ಟು ಪ್ರಮಾಣದಲ್ಲಿ ಕಲಾತ್ಮಕವಾದ ಜ್ಞಾನವಿದ್ದಿತ್ತೆಂಬುದು ಅವರ ಕಲಾಕೃತಿಗಳನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಅವರ ದೈನಂದಿನ ಜೀವನದಲ್ಲಿ ಔಪಯೋಗಿಕವಾದ ಮಡಿಕೆಗಳ ಹೊರ ಮೇಲ್ಮೈಗಳಲ್ಲಿ ಸುಂದರವಾದ ರೇಖೆಗಳಿಂದ ಕೂಡಿವೆ. ಅವುಗಳು ವರ್ಣಮಯವಾದ ವರ್ಣ ವಿನ್ಯಾಸಗಳಿಂದ ಹಾಗೂ ಹಲವಾರು ಆಕರ್ಷಕ ಚಿತ್ತಾರಗಳಿಂದ ಅಲಂಕರಿಸಿರುವುದನ್ನು ನೋಡಬಹುದು. ನವಿಲು, ಜಾಮಿತಿಕ ಆಕೃತಿಗಳು, ಅಲ್ಲದೇ ಹೂ ಬಳ್ಳಿಗಳನ್ನು ರೇಖೆಯಲ್ಲಿಯೇ ಚಿತ್ರಿಸಲಾಗಿದೆ. ಕಲಾವಿದನಿಗೆ ರಚಿಸುವ ಮಾಧ್ಯಮ ಯಾವುದಾದರೇನು, ಅವನ ಕ್ರಿಯಾತ್ಮಕತೆಯು ಅವಶ್ಯಕತೆಗೆ ಪೂರಕವಾಗಿ ಮೂಡಿ ಬರುತ್ತದೆ. ಸಿಂಧುಕೊಳ್ಳದ ಸಂಸ್ಕೃತಿಯಲ್ಲಿನ ನಗರ ನಿರ್ಮಾಣವು ಸ್ಪಷ್ಟವಾಗಿ ಸರಳ ರೇಖಾಕೃತಿಯ ಪರಿಧಿಯಲ್ಲಿಯೇ ವಾಸ್ತುವಿನ್ಯಾಸವನ್ನು ಹೊಂದಿದೆ. ನಗರದ ಪರಿಕಲ್ಪನೆಯು ಮತ್ತು ನಗರದ ಬೀದಿಗಳ ರಚನೆ, ಗೃಹಗಳ ವಿನ್ಯಾಸವು ಈ ತತ್ವದಡಿಯಲ್ಲಿಯೆ ನಿರ್ಮಾಣವಾಗಿವೆ. ಆ ಕಾಲದ ಟೆರ್ರಕೊಟ್ಟಾ(ಸುಡಾವೆ ಮಣ್ಣು)ದಲ್ಲಿ ಮುದ್ರಿಸಿರುವ ಕಿರು ಆಕೃತಿಗಳ ಮುದ್ರಾಂಕಗಳ (ನಾಣ್ಯ) ರಚನೆಯು ರೇಖಾತ್ಮಕವಾದದ್ದೆ. ಅವುಗಳು ತೆಳು ಉಬ್ಬು ಶಿಲ್ಪಗಳಂತೆ ಕಂಡರೂ ವಾಸ್ತವದಲ್ಲಿ ರೇಖೆಯೇ ಪ್ರಧಾನವಾಗಿದೆ. ವಿಶೇಷವಾಗಿ ಪ್ರಾಣಿಗಳ ಬಾಹ್ಯ ರೇಖೆಗಳನ್ನು ಗಟ್ಟಿಯಾಗಿ ಕಂಡರಿಸಿದಂತೆ ಬಿಂಬಿಸುವ ಉದ್ದೇಶವು, ಪ್ರಾಣಿಯ ಮೈಮಾಟವನ್ನು ಪ್ರಚುರಪಡಿಸುವುದಾಗಿದೆ. ಹರಪ್ಪಾ ಸಂಸ್ಕೃತಿಯ ಕಲೆಯನ್ನು ಸ್ಪಷ್ಟ ನುಡಿಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅಭಿವೃದ್ಧಿಯ ಹಂತ ಹಾಗೂ ಮುಂದುವರೆದ ಭಾಗವೆಂದು ಹೇಳಬಹುದು. ಇಲ್ಲಿನ ಕಲೆಯಲ್ಲಿ ರೇಖೆಯ ಸಾರವು-ಘನಾತ್ಮಕತೆಯನ್ನು ಕೂಡಾ ಬಿಂಬಿಸುತ್ತದೆ.

ಐತಿಹಾಸಿಕ ಕಾಲಘಟ್ಟವನ್ನು ಕಲಾತ್ಮಕತೆಗೆ ಮತ್ತು ಚಿತ್ರ ಶಿಲ್ಪಕಲೆಗೆ ಪೂರಕವಾಗಿ ನೋಡಿದಾಗ ರೇಖಾಕೃತಿಯು ಬಹುಮುಖ್ಯವಾದ ಭೂಮಿಕೆಯನ್ನು ನಿರ್ವಹಿಸುತ್ತಿತ್ತು. ಶಿಲ್ಪವೊಂದರ ರಚನಾ ಪೂರ್ವದಲ್ಲಿ ಶಿಲ್ಪದ ಮೇಲೆ ಉದ್ದೇಶಿತ ಆಕೃತಿಯನ್ನು ರಚಿಸಿಕೊಳ್ಳಲಾಗುತ್ತಿತ್ತು. ತದನಂತರದಲ್ಲಿಯೇ ಅದರ ಅಚ್ಚಿನಾಕೃತಿ ಅಥವಾ ಉಬ್ಬ ಶಿಲ್ಪಾಕೃತಿಯನ್ನು ರಚಿಸಲಾಗುತ್ತಿತ್ತು.

ಐತಿಹಾಸಿಕವಾಗಿ ಮೌರ್ಯರ ಕಾಲದ ಬೌದ್ಧ ಕಲೆಯೇ ಕಲಾ ಇತಿಹಾಸದ ಐತಿಹಾಸಿಕ ಕಾಲಘಟ್ಟದ ದೃಷ್ಟಿಯಿಂದ ಅತ್ಯಂತ ಪ್ರಾಚೀನವಾದುದು. ಕರ್ನಾಟಕದಲ್ಲಿ ಆ ಕಾಲದ ಬೌದ್ಧ ಕಲೆಯ ದಾಖಲೆಗಳು ಕಲಬುರಗಿ ಜಿಲ್ಲೆಯ ಸನ್ನತಿಯ ಬೌದ್ಧ ಸ್ತೂಪದಲ್ಲಿ ದೊರೆತಿವೆ. ಅಲ್ಲಿನ ಆಕೃತಿಗಳು ಕಥಾನಕವಾಗಿದ್ದು ಉಬ್ಬು ಶಿಲ್ಪಗಳಾಗಿವೆ. ಆ ಕಥಾನಕ ಆಕೃತಿಗಳ ಬಾಹ್ಯ ರೇಖೆಗಳು-ರೇಖಾಕೃತಿಯ ಭಾಗವೇ ಆಗಿವೆ. ಶಿಲ್ಪಗಳನ್ನು ಕಥಾನಕವಾಗಿ ಪರಿಕಲ್ಪಿಸುವ ಕಲಾವಿದನು, ಯಾವ ಅಳತೆಯಲ್ಲಿ ಯಾವ ಆಕೃತಿಯು ಬರಬೇಕೆಂಬ ನಿರ್ಧಾರವನ್ನು ಶಿಲೆಯ ಅಳತೆ ಹಾಗೇ ಕಥಾನಕದ ಪ್ರಮುಖ ಘಟನೆ ಹಾಗೂ ಅದರ ಕಥಾ ಹಂದರಗಳಿಗೆ ಪೂರಕವಾಗಿ ನಿರ್ಧರಿಸುತ್ತಾನೆ. ಕಲಾವಿದನು ಸ್ಟೋರಿ ಬೋರ್ಡಿನ ರೀತಿಯಲ್ಲಿ ಉದ್ದೇಶಿತ ಆಕೃತಿಗಳನ್ನು ಹಾಗೂ ಕಥಾನಕವನ್ನು ಅರ್ಥವತ್ತಾಗಿ ಪರಿಕಲ್ಪಿಸುತ್ತಾನೆ. ಇಲ್ಲಿಯೂ ರೇಖಾಕೃತಿಗಳೇ ಮೂಲ ಜೀವಾಳವಾಗಿ ಬಿಡುತ್ತವೆ. ಕಥಾನಕದ ಪರಿಕಲ್ಪನೆಯಲ್ಲಿಯ ಆಕೃತಿಗಳಿಗೆ ಮೂಲ ದೃಶ್ಯರೂಪದ ರಚನೆಯಾಗುವುದು ರೇಖಾ ಚಿತ್ರಗಳಿಂದಲೆ ಆಗಿದೆ.

ಪ್ರಾಚೀನ ಶಿಲ್ಪಕಲಾ ಕೆತ್ತನಾ ಸಂಪ್ರದಾಯವನ್ನು ಅಮೂಲಾಗ್ರವಾಗಿ ನೋಡಿದಾಗ ಶಿಲ್ಪಕಲಾವಿದನಾಗಲು ಬೇಕಾದ ಮೂಲಭೂತ ಅರ್ಹತೆಗಳಲ್ಲಿ ಶುದ್ಧವಾದ ಚಿತ್ರ ರಚನಾ ಜ್ಞಾನವು ಮುಖ್ಯವಾದುದು. ರೇಖಾಚಿತ್ರವನ್ನು ಎಷ್ಟು ಸೊಗಸಾಗಿ ಮತ್ತು ಪ್ರಮಾಣಬದ್ಧವಾಗಿ ರಚಿಸಲು ಸಾಧ್ಯವೋ ಅಷ್ಟೆ ಸೊಗಸಾಗಿ ಮೂರ್ತಿಯ ಕೆತ್ತನೆಯನ್ನು ಮಾಡಲು ಸಾಧ್ಯ. ರೇಖಾ ಚಿತ್ರವೇ ಈ ಶಿಲ್ಪಗಳ ರಚನೆಗೆ ಮೂಲ ಆಕರ. ಕಲಾವಿದನಿಗೆ ರೇಖಾ ಚಿತ್ರದ ರಚನೆಯಲ್ಲಿ ಹಿಡಿತವಿದ್ದಲ್ಲಿ ಮಾತ್ರ ಉತ್ತಮ ಕಲಾಕೃತಿಯೊಂದು ರೂಪಗೊಳ್ಳಲು ಸಾಧ್ಯ. ಆಕೃತಿಯ ಪರಿಕಲ್ಪನೆ ಮತ್ತು ಅದರ ಕೆತ್ತನೆಯಲ್ಲಿ ಸ್ಪಷ್ಟತೆ ಇದ್ದಲ್ಲಿ ಸುಂದರವಾದ ಆಕೃತಿಯ ರಚನೆ ಸಾಧ್ಯ. ಕರ್ನಾಟಕದ ಆರಂಭಿಕ ಶಿಲ್ಪಕಲೆಯ ತವರೂರಾದ ಸನ್ನತಿಯಲ್ಲಿನ ಬಹುತೇಕ ಶಿಲ್ಪಗಳು ಉಬ್ಬುಶಿಲ್ಪಗಳಾಗಿದ್ದು ಅವುಗಳ ಸಂರಚನೆಯಲ್ಲಿ ರೇಖೆಯೇ ಪ್ರಧಾನವಾದಂತೆ ಕಾಣುತ್ತದೆ. ಇದೇ ಕಾಲದಲ್ಲಿ ಅಭಿವೃದ್ಧಿಯಾಗಿ ಪ್ರಚಲಿತವಾಗಿರುವ



ಅಕ್ಷರ ವಿನ್ಯಾಸ ಅಥವಾ ಬ್ರಾಹ್ಮಿ ಲಿಪಿಯ ಅಕ್ಷರಗಳೆಲ್ಲವೂ ರೇಖಾ ಪ್ರಧಾನವಾಗಿವೆ ಮತ್ತು ಅವುಗಳನ್ನು ಚಪ್ಪಟೆಯ ಪಾಟಿಯ ಮೇಲೆ ಬರೆದಂತೆ ಸಮತಟ್ಟಾದ ಕಲ್ಲಿನ ಫಲಕದ ಮೇಲೆ ಅತ್ಯಂತ ನಾಜೂಕಾಗಿ ಕಂಡರಿಸಲಾಗಿರುತ್ತದೆ (ಕೆತ್ತಲಾಗಿರುತ್ತದೆ). ಸನ್ನತಿಯಲ್ಲಿಯೇ ದೊರೆತಂತಹ ಬುದ್ಧ ಪಾದುಕೆ ಶಿಲ್ಪದ ಎಲ್ಲ ವಿವರವಾದ ಚಿತ್ರಣಗಳು ರೇಖಾ ಕಂಡರಿಕೆಯಿಂದಲೇ ರಚಿಸಲಾಗಿವೆ. ಅವುಗಳಲ್ಲಿ ಬುದ್ಧನ ಪಾದುಕೆಯಲ್ಲಿನ ಸಾಂಕೇತಿಕವಾದ ವಿನ್ಯಾಸಗಳ ಆಕೃತಿಗಳು ಬಹು ಸೊಗಸಾಗಿ ಮೂಡಿಬಂದಿವೆ. ಇಲ್ಲಿ ಪ್ರಸ್ತುತ ಶಿಲ್ಪವು ಪಾದುಕೆ ಘನಾಕೃತಿಯನ್ನು ಬಿಂಬಿಸಿದರೂ ಕಲಾವಿದ ಪಾದುಕೆಯ ಮೇಲಿನ ಎಲ್ಲ ವಿವರಗಳ ನಿರ್ವಹಣೆಗೆ ರೇಖಾಕೃತಿಯನ್ನೇ ಅವಲಂಬಿಸಿದ್ದಾನೆ. ಇದರಿಂದಾಗಿ ಸೂಕ್ಷ್ಮವಾದ ರಚನೆಗಳು ಸಾಧ್ಯವಾಗುತ್ತವೆ. ಸನ್ನತಿಯಲ್ಲಿನ ಎಲ್ಲ ಉಬ್ಬು ಶಿಲ್ಪಗಳ ಬಾಹ್ಯ ಆಕೃತಿಗಳು ರೇಖಾತ್ಮಕವಾಗಿ ಕಂಡುಬರುತ್ತವೆ. ರೇಖೆಯ ಲಲಿತವಾದ ರಚನೆಯು ಆಕೃತಿಯ ಮೈಮಾಟವನ್ನು ನಿರ್ಧರಿಸುತ್ತದೆ. ನಂತರದ ಬಾದಾಮಿ ಚಾಲುಕ್ಯರ ಗುಹಾಲಯಗಳು, ಬಿಡಿ ದೇವಾಲಯಗಳ ರಚನೆಯಲ್ಲಿ ಮತ್ತು ಅವುಗಳಲ್ಲಿನ ಶಿಲ್ಪಗಳ ಕೆತ್ತನೆಗೆ ರೇಖಾವಿನ್ಯಾಸವೇ ಮೂಲ ಪ್ರೇರಣೆ. ವಿಶೇಷವಾಗಿ ಆಕೃತಿಯ ವಿನ್ಯಾಸವನ್ನು ಮೊದಲಿಗೆ ರೇಖೆಯಲ್ಲಿ ನಿರ್ದೇಶನ ಮಾಡಲಾಗುತ್ತದೆ ಎಂಬುದು ಸರ್ವ ವಿಧಿತ. ಅದರ ಕೆತ್ತನೆಗಳಾದ ಮೇಲೆ ಆಕೃತಿಯಲ್ಲಿನ

***ಐತಿಹಾಸಿಕವಾಗಿ ಮೌರ್ಯರ ಕಾಲದ ಬೌದ್ಧ ಕಲೆಯೇ ಕಲಾ ಇತಿಹಾಸದ ಐತಿಹಾಸಿಕ ಕಾಲಘಟ್ಟದ ದೃಷ್ಟಿಯಿಂದ ಅತ್ಯಂತ ಪ್ರಾಚೀನವಾದುದು. ಕರ್ನಾಟಕದಲ್ಲಿ, ಆ ಕಾಲದ ಬೌದ್ಧ ಕಲೆಯ ದಾಖಲೆಗಳು ಕಲಬುರಗಿ ಜಿಲ್ಲೆಯ ಸನ್ನತಿಯ ಬೌದ್ಧ ಸ್ತೂಪದಲ್ಲಿ ದೊರೆತಿವೆ. ಅಲ್ಲಿನ ಆಕೃತಿಗಳು ಕಥಾನಕವಾಗಿದ್ದು ಉಬ್ಬು ಶಿಲ್ಪಗಳಾಗಿವೆ. ಆ ಕಥನಾಕ ಆಕೃತಿಗಳ ಬಾಹ್ಯ ರೇಖೆಗಳು-ರೇಖಾಕೃತಿಯ ಭಾಗವೇ ಆಗಿವೆ.***

ಸೂಕ್ಷ್ಮವಾದ ಕುಶಲಾತ್ಮಕವಾದ ಕೆತ್ತನೆಗಳನ್ನು ರೇಖೆಯ ಕಂಡರಣೆಯಿಂದಲೇ ಬಿಂಬಿಸಲಾಗುತ್ತದೆ. ಬಾದಾಮಿಯ ಮೂರನೆಯ ಗುಹಾಲಯದ ಶೇಷಾಸನ ವಿಷ್ಣುವಿನ ಶಿಲ್ಪದಲ್ಲಿ ಅವನ ವಸ್ತ್ರದ ವಿವರಣೆ ಗಳನ್ನು ನೋಡಿದರೆ ರೇಖೆಯ ಸುಂದರ ರಚನೆಯು ಗಮನ ಸೆಳೆಯುತ್ತದೆ. ಅದೇ ರೀತಿಯಾಗಿ ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದ ಹೊರಗೋಡೆಯಲ್ಲಿನ ಅಪೂರ್ಣ ಶಿಲ್ಪಗಳೆರಡನ್ನು ಗಮನಿಸಿದರೆ, ಅವುಗಳನ್ನು ರೇಖೆಗಳಿಂದಲೆ ಕಂಡರಿಸಿ ಕೆತ್ತನೆಗೆ ಅಣಿಗೊಳಿಸಲಾಗಿದೆ.

ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳ ಶಿಲ್ಪಕಲೆಯಲ್ಲಿಯು ಕೂಡಾ ರೇಖಾಚಿತ್ರಗಳ ರಚನೆಗೆ ಬಹು ಪ್ರಧಾನವಾದ ಪ್ರಾಮುಖ್ಯತೆ ಇದ್ದಿತ್ತು. ಆ ಕಾಲದ ಹಲವಾರು ದೇವಾಲಯಗಳಲ್ಲಿ ಅರ್ಧ ಕೆತ್ತಿದ ಶಿಲ್ಪಗಳ ಮೂಲವಿನ್ಯಾಸವನ್ನು ರೇಖೆಯಲ್ಲಿ ನಿರ್ದೇಶಿಸಿ ನಂತರ ಆ ಆಕೃತಿಯ ಪೂರ್ಣ ಕೆತ್ತನೆ ಮಾಡಲಾಗುತ್ತಿತ್ತು. ವಿಶೇಷವಾಗಿ ಕಂಬಗಳ ಹೊಳಪಾದ ಮೇಲ್ಮೈಗಳಲ್ಲಿ ಸುಂದರವಾದ ಕಂಡರಿತ ರೇಖಾ ಕೃತಿಗಳೂ ಕೂಡಾ ಗಮನ ಸೆಳೆಯುತ್ತವೆ. ಶಿಲ್ಪಕಲೆಯೇ ಪ್ರಧಾನವಾದರೂ ಅವುಗಳ ಮೂಲ ಸೆಲೆಯಾಗಿ ರೇಖಾಚಿತ್ರವು ರಚನೆಗೊಳ್ಳುತ್ತಿದ್ದುದು ಸೃಜನಶೀಲತೆಯ ಮತ್ತು ಕ್ರಿಯಾತ್ಮಕತೆಯ ದಾಖಲೆಯಾಗಿದೆ.

ರೇಖಾಚಿತ್ರಣವು ಎಲ್ಲಾ ಕಲಾ ರಚನೆಯ ಜೀವಾಳ ಅಥವಾ ಮೂಲ ತಳಹದಿ. ಚಿತ್ರಕಲೆಯ ಅಭಿವೃದ್ಧಿಯಲ್ಲಿಯೂ ನಾವು ರೇಖಾಕೃತಿಯ ಬೆಳವಣಿಗೆಯನ್ನು ಗಮನಿಸಬಹುದು. ಯಾವುದೇ ಕಲಾಕೃತಿಯ ರಚನೆಗೆ ಮೂಲ ಸೆಲೆಯಾಗಿ ರೇಖಾಚಿತ್ರದ ರಚನೆಯಾಗಲೇಬೇಕು. ಇದನ್ನೆ

‘ಕಾರ್ಟೂನಿಂಗ್’ ಎನ್ನುವುದು ಅಥವಾ ಪಾರಂಪರಿಕ ಚಿತ್ರಕಲೆಯಲ್ಲಿ ‘ತರಹ’ ಎಂದು ಕರೆಯಲಾಗುತ್ತದೆ. ಇದನ್ನೆ ಸುಲ್ತಾನೇಟ್ ಚಿತ್ರಗಳಲ್ಲಿ ‘ಕಲಮ್’ ಎಂತಲೂ ಕರೆಯಲಾಗುತ್ತದೆ. ಪಾರಂಪರಿಕ ಚಿತ್ರ ರಚನೆಯಲ್ಲಿ ಮೂಲ ಆಕೃತಿಗಳ ಮತ್ತು ಸಂಯೋಜಕನಿಗೆ ಬಹು ಪ್ರಾಧಾನ್ಯತೆ ಇರುತ್ತಿತ್ತು. ಪ್ರಾಚೀನಕಾಲದಲ್ಲಿ ಚಿತ್ರವೊಂದರ ರಚನೆ ಏಕವ್ಯಕ್ತಿಗತವಾಗಿರಲಿಲ್ಲ. ರೇಖಾಚಿತ್ರವನ್ನು ರಚಿಸಲು ನಿಷ್ಣಾತನಾದ ಕಲಾವಿದನೊಬ್ಬ, ಅದೇ ರೀತಿ ವಿವಿಧ ವರ್ಣಗಳಿಗೆ ಬೇರೆ ಬೇರೆ ಕಲಾವಿದರಿರುತ್ತಿದ್ದರು. ಮೈಬಣ್ಣಕ್ಕೊಬ್ಬ, ಅಲಂಕಾರಗಳನ್ನು ರಚಿಸಲು ಮತ್ತೊಬ್ಬ, ಹೀಗೆ ಒಟ್ಟಾರೆ ಚಿತ್ರಗಳನ್ನು ರಚಿಸಿದ ಮೇಲೆ ಕಣ್ಣುಗಳನ್ನು ರಚಿಸಲು ಪ್ರಧಾನ ಕಲಾವಿದನಿರುತಿದ್ದ. ಇದೇ ಪ್ರಕಾರವಾಗಿ ಭಿತ್ತಿ ಚಿತ್ರಗಳೂ ಕೂಡ ರಚನೆಯಾಗುತ್ತಿದ್ದವು. ಸಾಮಾನ್ಯವಾಗಿ ಎಲ್ಲ ಕಲಾವಿದರೂ ಕಲಾಕೃತಿಯ ರಚನೆಯಲ್ಲಿ ಮೊದಲು ರೇಖಾಚಿತ್ರವನ್ನು ರಚಿಸಿದ ಮೇಲೆಯೇ ನಂತರದ ವರ್ಣವಿನ್ಯಾಸಕ್ಕೆ ಎಡೆಮಾಡುವುದು. ಕರ್ನಾಟಕದಲ್ಲಿನ ಆರಂಭಿಕ ಕಲೆಯ ಎಲ್ಲ ಪ್ರಕಾರಗಳಲ್ಲಿಯೂ ರೇಖಾಚಿತ್ರಣವು ಮುಖ್ಯ ಭೂಮಿಕೆಯನ್ನು ನಿರ್ವಹಿಸುತ್ತದೆ.

ವರ್ಣಚಿತ್ರಗಳ ರಚನೆಯನ್ನು ಬಾದಾಮಿಯ ಗುಹಾಲಯಗಳಲ್ಲಿ ಮೊಟ್ಟಮೊದಲ ಬಾರಿಗೆ ನೋಡಬಹುದು. ಬಾದಾಮಿಯ ಗುಹಾಲಯಗಳು ವಾಸ್ತವಿಕವಾಗಿ ಶಿಲ್ಪಪ್ರಧಾನವಾಗಿದ್ದರೂ ಆ ಕಾಲದ ಗುಹಾಲಯಗಳ ರೂಪರೇಷೆಯಂತೆ ಚಿತ್ರಗಳ ರಚನೆಯನ್ನು ಇಲ್ಲಿ ಮೈಗೂಡಿಸಿ ಕೊಳ್ಳಲಾಗಿದೆ. ಮೂರನೆಯ ಗುಹಾಲಯದ ಕಪೋತದ(ಸಜ್ಜಾ) ಒಳಭಾಗದಲ್ಲಿ ವರ್ಣಚಿತ್ರಗಳ ರಚನಾ ಅವಶೇಷಗಳನ್ನು ನೋಡಬಹುದು. ಬಹುತೇಕವಾದ ಚಿತ್ರಗಳು ಮಾಸಿಹೋಗಿದ್ದು ಸಂಪೂರ್ಣವಾಗಿ ಹಾಳಾಗಿವೆ. ಅಜಂತಾ ಗುಹಾಲಯಗಳಲ್ಲಿನ ಚಿತ್ರಗಳಂತೆಯೇ ಇಲ್ಲಿನ ಚಿತ್ರಗಳಲ್ಲಿಯೂ ರೇಖಾಚಿತ್ರ ಪ್ರಧಾನವಾದ ಅಥವಾ ಆಕೃತಿಗಳ ಬಾಹ್ಯರೇಖಾ ಪ್ರಧಾನವಾದ ಚಿತ್ರಗಳನ್ನು ನೋಡಬಹುದು.

ಭಾರತೀಯ ಚಿತ್ರಗಳಲ್ಲಿ ಕಂಡುಬರುವ ವರ್ಣವಿನ್ಯಾಸದಲ್ಲಿ ನೆಳಲು ಬೆಳಕಿನ ಸಂಯೋಜನೆಯನ್ನು ಪ್ರಾಚೀನ ಪಾರಂಪರಿಕ ಚಿತ್ರಗಳಲ್ಲಿ ಕೇವಲ ‘ಕ್ಯುರಾಸ್ಕೊರೋವಿನ’ ಹಾಗೆ ರಚಿಸಲಾಗಿರುತ್ತದೆ. ಮೈಬಣ್ಣ ಮತ್ತು ವಸ್ತ್ರವಿನ್ಯಾಸಗಳಲ್ಲಿ ವರ್ಣವೈವಿಧ್ಯತೆಯಿದ್ದರೂ ರೇಖೆಗಳು ಕಂಡರಿಸಿದಂತೆಯಿದ್ದು ಸಾಕಷ್ಟು ಸ್ಪಷ್ಟವಾಗಿರುತ್ತವೆ. ಇಂದು ಉಳಿದಿರುವ ಕೆಲವೇ ಆಕೃತಿಗಳ ಅವಶೇಷಗಳನ್ನು 1960ರ ದಶಕದಲ್ಲಿ ಅಂದಿನ ಪ್ರಸಿದ್ಧ ಕಲಾವಿದರಾದ ಶ್ರೀ ಮಿಣಜಗಿ ಮತ್ತು ಶ್ರೀ. ಅಹಿವಾಸಿಯವರು ಬಾದಾಮಿಯ ಗುಹಾಲಯ ಭಿತ್ತಿಚಿತ್ರಗಳನ್ನು ಆ ಕಾಲದಲ್ಲಿಯೇ ನಕಲು ಮಾಡಿದ್ದು, ಅದರ ಆಧಾರದಿಂದ ಈ ನಿಲುವನ್ನು ತಾಳಬಹುದಾಗಿದೆ. ಬಾದಾಮಿಯಲ್ಲಿನ ಶಿಲ್ಪಕಲೆಗೆ ಪೂರಕವಾಗಿಯೇ ಚಿತ್ರಗಳ ರಚನೆಗಳೂ ಆಗಿವೆ.

ಇಲ್ಲಿ ಇನ್ನೊಂದು ಮುಖ್ಯವಾದ ಅಂಶವೊಂದಿದೆ. ಅದೇನೆಂದರೆ ಶಿಲ್ಪಕಲಾವಿದರೂ ಮತ್ತು ಚಿತ್ರಕಲಾವಿದರು ಪ್ರಾಚೀನ ಕಾಲದಲ್ಲಿ ಒಬ್ಬರೇ ಆಗಿರುತ್ತಿದ್ದರು ಅಥವಾ ಒಬ್ಬನೇ ಕಲಾವಿದನಿಗೆ ಚಿತ್ರ ರಚನೆ ಮತ್ತು ಶಿಲ್ಪಕೆತ್ತನೆಗಳು ಬರುತ್ತಿದ್ದವು. ಈ ವಿಚಾರವಾಗಿ ಅಜಂತಾದ ಶಿಲ್ಪ ಮತ್ತು ಚಿತ್ರಗಳ ಕುರಿತಾದ ಅಧ್ಯಯನದಲ್ಲಿ ಸಾಕಷ್ಟು ಬೆಳಕು ಚೆಲ್ಲಲಾಗಿದೆ. ಅಲ್ಲಿನ ಗುಹಾಲಯ ಸಂಖ್ಯೆ 6ರಲ್ಲಿ ಬುದ್ಧನ ತಪಸ್ಸಿನ ಕಥನದ ಮಾರವಿಜಯ ಚಿತ್ರಣದ ವಿನ್ಯಾಸವನ್ನು ಯಥಾವತ್ತಾಗಿ ಗುಹಾಲಯ 26ರಲ್ಲಿ ಶಿಲ್ಪಿಸಲಾಗಿದೆ.

ಬಾದಾಮಿಯ ವಿಚಾರದಲ್ಲಿ ಅಂತಹ ದಾಖಲೆಗಳಿಲ್ಲ, ಆದರೆ ಗುಹಾಲಯಗಳ ಒಳಮಾಳಿಗೆಗಳ ವಿನ್ಯಾಸಗಳು ಚಿತ್ರಗಳ ಹಿನ್ನೆಲೆಗೆ ಪೂರಕವಾದಂತೆ ರೇಖಾಪ್ರಧಾನವಾಗಿವೆ. ಅದೇ ರೀತಿ ಎಲ್ಲೋರದ ರಾಷ್ಟ್ರಕೂಟರ ಕಾಲದ ಕೈಲಾಸನಾಥ ದೇವಾಲಯದ ಚಿತ್ರಗಳಲ್ಲಿಯೂ(ಅಲ್ಲಿಯೂ ಚಿತ್ರಗಳು ಬಹುತೇಕವಾಗಿ ನಶಿಸಿಹೋಗಿವೆ). ಆದರೂ ಅಲ್ಲಿನ ನಟರಾಜ-ಬಾದಾಮಿ ಗುಹಾಲಯದ ನಟರಾಜನ ಶಿಲ್ಪದ ಪ್ರೇರಣೆಯಿಂದ ರಚಿತವಾಗಿದ್ದು ರೇಖಾಪ್ರಧಾನವಾಗಿದೆ.

ರೇಖಾಚಿತ್ರದಲ್ಲಿನ ವಿನ್ಯಾಸಗಳನ್ನು ಆಯಾ ಆಕೃತಿಗಳ ಪರಿಕಲ್ಪನೆಗೆ ಪೂರಕವಾಗಿ ಕಲ್ಪಿಸ ಲಾಗುತ್ತದೆ. ಸರಳ ರೇಖೆಗಳನ್ನು ದುಡಿಸಿಕೊಂಡು ಆಕೃತಿಯ ಮೈಮಾಟವನ್ನು ಬಿಂಬಿಸಿದರೆ, ವಸ್ತ್ರ-ಅಲಂಕಾರ-ಹಿನ್ನೆಲೆ ಹೀಗೆ ಎಲ್ಲವುಗಳನ್ನು ಅತ್ಯಂತ ಕುಸುರಿನಿಂದ ಕೂಡಿದಂತೆ ರಚಿಸಲಾಗುತ್ತದೆ. ಕಲ್ಯಾಣದ ಚಾಲುಕ್ಯರ ಹಾಗೂ ಹೊಯ್ಸಳರ ಕಾಲದ ಶಿಲ್ಪಗಳಲ್ಲಿನ ಸೂಕ್ಷ್ಮತೆ ಮತ್ತು ಕುಸುರಿನ ಕೆತ್ತನೆಯನ್ನು ನುರಿತ ರೇಖಾಚಿತ್ರಕಾರನ ಚಿತ್ರದ ಸಹಾಯದಿಂದ ಮಾತ್ರ ಕೆತ್ತಲು ಸಾಧ್ಯವಾಗುತ್ತದೆ. ಹೀಗಾಗಿ ಚಿತ್ರರಚನೆಯದು ಬಹುಮುಖ್ಯವಾದ ಭೂಮಿಕೆಯಾಗಿದೆ. ಕಲ್ಯಾಣ ಚಾಲುಕ್ಯರ ರಾಜ ಮೂರನೆಯ ಸೋಮೇಶ್ವರ ರಚಿಸಿದ "ಮಾನಸೋಲ್ಲಾಸ/ ಅಭಿಲಾಷಿತಾರ್ಥ ಚಿಂತಾಮಣಿ" ಕೃತಿಯಲ್ಲಿ ಚಿತ್ರರಚನೆಗೆ ಪೂರಕವಾಗಿ ಮತ್ತು ಅದರ ಹೊರಹುಗಳಾದ ವರ್ಣವಿನ್ಯಾಸ, ಭಿತ್ತಿನಿರ್ಮಾಣ, ವರ್ಣಗಳ ತಯಾರಿ, ಕುಂಚಗಳ ತಯಾರಿ ಹೀಗೆ ಸುಮಾರು 700 ಶ್ಲೋಕಗಳ ಮೂಲಕ ಬಿಡಿಸಿ ಹೇಳಲಾಗಿದೆ. ಚಿತ್ರರಚನೆಯನ್ನು ಒಂದು ದೈವೀಕ ಕಲೆಯಂತಲೂ ಮತ್ತು ದೈವೀಕ ಕೆಲಸವೆಂತಲೂ ಮಾಡಲಾಗುತ್ತಿತ್ತು. ರಚನೆಯ ಉದ್ದೇಶಕ್ಕೆ ಪೂರಕವಾದ ಆಕೃತಿಯ ಅಥವಾ ವಸ್ತುವಿನ ಆಯ್ಕೆ ಮತ್ತು ಅದರ ವಿನ್ಯಾಸವು ರೇಖೆಯಲ್ಲಿ ಅರಳುತ್ತಿತ್ತು. ಈ ಎಲ್ಲ ವಿವರಗಳಿರುವ ಮಾನಸೋಲ್ಲಾಸ ಕೃತಿಯನ್ನು ಕನ್ನಡ ಮೊದಲ ಚಿತ್ರರಚನಾ ವ್ಯಾಕರಣ ಸಾಹಿತ್ಯಿಕ ಕೃತಿಯನ್ನ ಬಹುದು. ಕಲ್ಯಾಣ ಚಾಲುಕ್ಯ ಶಿಲ್ಪ ಕಲಾವಿದರು ರೆಖಾಚಿತ್ರಗಳಲ್ಲಿ ನಿಷ್ಣಾತರಾಗಿದ್ದರು. ಇದಕ್ಕೆ ಆ ಕಾಲದ ಹಲವಾರು ಅತ್ಯಂತ ಸಂವೇದನಾಶೀಲ ಮತ್ತು ಮನೋಜ್ಞವಾದ ಶಿಲ್ಪಕೃತಿಗಳೇ ಸಾಕ್ಷಿ. ಜಲಸಂಗಿಯ ಮಾಹದೇವ ದೇವಾಲಯದ ಶಿಲ್ಪಗಳು, ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ಮದನಿಕಾ ಶಿಲ್ಪಗಳು ಹೊಯ್ಸಳ ಶಿಲ್ಪಕಲೆಗೆ ಮೊದಲೇ ರಚನೆಯಾಗಿದ್ದವು. ಹೊಯ್ಸಳ ಶಿಲ್ಪಕಲೆ ಯಲ್ಲಿಯೇ ಅರ್ಧವಾಗಿ ಕೆತ್ತಿದ ಶಿಲ್ಪಗಳಲ್ಲಿ ಸ್ಪಷ್ಟವಾಗಿ ಆಕೃತಿಯ ಬಾಹ್ಯ ರೇಖೆಗಳನ್ನು ಕಂಡರಿಸಿರುವುದು ಕಂಡುಬರುತ್ತದೆ. ಆ ಕಾಲದ ದೇವಾಲಯಗಳಲ್ಲಿನ ಅರೆ ಕೆತ್ತಿದ ಶಿಲ್ಪಗಳ ದಾಖಲೆಗಳನ್ನು ನೋಡಿದಾಗ ಮತ್ತು ರೇಖಾಕೃತಿಯ ಕಂಡರಣೆಗಳನ್ನು ನೋಡಿದಾಗ ಸ್ಪಷ್ಟವಾಗಿ ಆ ಕಾಲದ ರೇಖಾ ಲಾಲಿತ್ಯ ಮತ್ತು ಅದರ ಸುಂದರವಾದ ವಿನ್ಯಾಸಗಳನ್ನು ನೋಡಬಹುದಾಗಿದೆ.

ಈ ಮೇಲಿನ ಕಾಲಘಟ್ಟದಲ್ಲಿ ಶಿಲ್ಪ ಪ್ರಧಾನವಾದ ದೇವಾಲಯ ಚಟುವಟಿಕೆಗಳಾಗಿದ್ದರಿಂದ ಚಿತ್ರಕಲೆಯು ಸ್ವಲ್ಪಮಟ್ಟಿನ ಹಿನ್ನಡೆ ಅನುಭವಿಸಿತು. ಆದರೆ, ರೇಖಾಕೃತಿ ರಚನೆ ನಿರಂತರ ಪ್ರಕ್ರಿಯೆಯಾಗಿ ಶಿಲ್ಪಕಲೆಯ ಬೆಳವಣಿಗೆಯ ಅವಿಭಾಜ್ಯ ಅಂಗವಾಗಿತ್ತು.

ರೇಖಾಚಿತ್ರವು ಚಿತ್ರಕಲೆಯಲ್ಲಿ ಬಹುಗಟ್ಟಿಯಾದ ಮೂಲ ಸೆಲೆಯಾಗಿದೆ. ಈ ನೆಲೆಯನ್ನು ಸೆಲೆಯೆಂದು ಹೇಳಬಹುದು. ವಿಜಯನಗರದ ಕಾಲವು ಚಿತ್ರಕಲೆಯ ಪುನರುಜ್ಜೀವನ ಕಾಲವೆಂದು ಹೇಳಬಹುದು. ವಿಶಾಲವಾದ ದೇವಾಲಯಗಳ ನಿರ್ಮಾಣದ ಜೊತೆಗೆ ಗಾರೆಗಚ್ಚಿನ ಶಿಲ್ಪಾಕೃತಿಗಳು ಮತ್ತು ದೇವಾಲಯಗಳ ಗೋಡೆ ಮತ್ತು ಒಳಮಾಳಿಗೆಗಳನ್ನು ಚಿತ್ರಗಳಿಂದ ಅಲಂಕರಿಸುವ ಪ್ರಕ್ರಿಯೆ



ಬಹು ತುರ್ತಾಗಿ ಅಭಿವೃದ್ಧಿಯಾಯಿತು. ಹಂಪಿಯ ವಿರೂಪಾಕ್ಷ ದೇವಾಲಯದ ಮಹಾರಂಗ ಮಂಟಪದ ಒಳಮಾಳಿಗೆಯ ಭಿತ್ತಿ ಚಿತ್ರಗಳು (ಸೀಲಿಂಗ್ ಪೇಂಟಿಂಗ್) ಸುಮಾರು 16ನೆಯ ಶತಮಾನದ ಆರಂಭದಲ್ಲಿ ರಚನೆಯಾಗಿವೆ. ಇಲ್ಲಿನ ಎಲ್ಲ ಚಿತ್ರಗಳು ರೇಖಾ ಪ್ರಧಾನವಾದವುಗಳೇ ಆಗಿವೆ. ಈ ಚಿತ್ರಗಳು ನಂತರದ ಕರ್ನಾಟಕದ ಭಿತ್ತಿ ಚಿತ್ರಕಲಾ ಪರಂಪರೆಗೆ ಮುನ್ನುಡಿಯನ್ನು ನೀಡುತ್ತವೆ. ಈ ಚಿತ್ರಗಳಲ್ಲಿ ವರ್ಣ ವಿನ್ಯಾಸವಿದ್ದರೂ ಬಹುತೇಕವಾಗಿ ಪ್ರತಿಯೊಂದು ಭಾಗವು ರೇಖಾ ಪ್ರಧಾನವಾಗಿವೆ. ಹೀಗಾಗಿ ಇವುಗಳನ್ನು ವರ್ಣಚಿತ್ರಗಳೆನ್ನದೇ ರೇಖಾವರ್ಣ ಚಿತ್ರಗಳೆನ್ನ ಬಹುದು. ಪಾಶ್ಚ್ಯಾತ್ಯ ಸಂಪ್ರದಾಯದಂತಹ ವರ್ಣ ವಿನ್ಯಾಸವನ್ನು ಈ ಕಾಲಘಟ್ಟದಲ್ಲಿ ಭಾರತೀಯ ಕಲೆಯಲ್ಲಿ ನೋಡಲು ಸಾಧ್ಯವಿಲ್ಲ ಅಥವಾ ಅಲ್ಲಿನ ಚಿತ್ರಕಲೆಯಲ್ಲಿ (ರೆನೆಸಾನ್ಸ್)ಕಂಡುಬರುವ ಮೈಮಾಟದ ದುಂಡುತನ ಅಥವಾ ನೆಳಲು ಬೆಳಕಿನ ಸಂಯೋಜನಾ ತಂತ್ರಗಾರಿಕೆ ಇಲ್ಲಿ ಕಾಣುವುದಿಲ್ಲ. ಬದಲಾಗಿ ಇಲ್ಲಿನ ಚಿತ್ರಗಳಲ್ಲಿ ಆಕೃತಿಯ ರಚನೆಗೆ ಮತ್ತು ಅದರ ನಿರೂಪಣೆಗೆ ಮಹತ್ವ ವಿರುವುದರಿಂದ ಆಕೃತಿಗಳು ಯಥಾವತ್ತಾಗಿ ರೇಖೆಗಳ ಪ್ರಾಮುಖ್ಯತೆಯನ್ನು ಉಳಿಸಿಕೊಳ್ಳುತ್ತವೆ. ಹಂಪಿಯ ವಿರೂಪಾಕ್ಷ ದೇವಾಲಯದ ಒಳಮಾಳಿಗೆಯ ಚಿತ್ರಗಳನ್ನು ಒಟ್ಟಾಗಿ ಆಯತಾಕಾರದ ಚೌಕಟ್ಟಿನಲ್ಲಿ ಮತ್ತು ಕಿರಿದಾದ ಚತುರಸ್ರ, ಆಯತಗಳ ಚೌಕಟ್ಟಿನಲ್ಲಿ ಸಂಯೋಜಿಸಲಾಗಿದೆ. ಇದರಿಂದಾಗಿ ಪ್ರತಿಯೊಂದು ಚಿತ್ರವೂ ಸ್ವತಂತ್ರವಾದ ಚಿತ್ರವೇ ಆಗಿದೆ.

ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲದಲ್ಲಿ ಸಾಕಷ್ಟು ಸಾಂಸ್ಕೃತಿಕವಾಗಿ ಪ್ರೋತ್ಸಾಹ ದೊರೆಯಿತು ಎಂಬುದು ಅಂದಿನ ದಾಖಲೆಗಳಿಂದ ಸರ್ವ ವಿಧಿತವಾಗಿದೆ. ವಿಶೇಷವಾಗಿ

ಕಲೆ ಮತ್ತು ಸಂಗೀತ ಮೊದಲಾದ ಮಾಧ್ಯಮಗಳು ಪ್ರಚುರಗೊಂಡವು. ಕಲೆಯಲ್ಲಿ ಶಿಲ್ಪ, ಗಾರೆಗಚ್ಚು, ಚಿತ್ರಕಲೆ, ಕಾಷ್ಟ ಕೆತ್ತನೆ ಅಲ್ಲದೇ ಜಾನಪದೀಯವಾದ ಸ್ಥಳೀಯವಾದ ಕಲಾ ಚಟುವಟಿಕೆಗಳಿಗೆ ಹೆಚ್ಚಿನ ಒಲವು ದೊರೆಯಿತು. ಇದರ ಭಾಗವಾಗಿಯೇ ಚಿತ್ರಕಲೆಯಲ್ಲಿ ನಾವು ವಿವಿಧತೆಯನ್ನು ಗಮನಿಸ ಬಹುದು. ವಿಜಯನಗರದ ಚಿತ್ರಕಲೆಯ ಸ್ಪಷ್ಟ ಚಿತ್ರಣವನ್ನು ಒಳಮಾಳಿಗೆಯ ಚಿತ್ರಗಳಿಂದ ಗುರುತಿಸ ಬಹುದು. ಮಹಾರಂಗಮಂಟಪದ ಒಳಮಾಳಿಗೆಯ ಚಿತ್ರಗಳಲ್ಲಿ ಸ್ಪಷ್ಟವಾದ ಆಕೃತಿಯ ಚಿತ್ರಣಗಳಿವೆ. ನಿರ್ಧಿಷ್ಟವಾದ ಮೈಮಾಟವನ್ನು ಹೊಂದಿದ ರಚನೆಗಳಿವೆ. ಕಲಾವಿದನು ಪ್ರತಿಯೊಂದು ಸಂಯೋಜನೆಯನ್ನು ಬಹು ಸೊಗಸಾಗಿ ಹಾಗೂ ಅರ್ಥವತ್ತಾಗಿ ನಿರೂಪಿಸಿದ್ದಾನೆ. ಉದಾಹರಣೆಗೆ, ತ್ರಿಪುರಸಂಹಾರ ಹಾಗೂ ಕಾಮರತಿಯರು ಶಿವನ ತಪ ಭಂಗಮಾಡಲು ಸನ್ನದ್ಧರಾದ ದೃಶ್ಯಗಳು ವಿಷಯ ನಿರೂಪಣೆಯ ದೃಷ್ಟಿಯಿಂದ ಹಾಗೂ ಸಂಯೋಜನೆಯ ದೃಷ್ಟಿಯಿಂದಲೂ ಮುಖ್ಯ ವಾಗುತ್ತವೆ. ಬಹು ಕ್ಲಿಷ್ಟ ಎನಿಸುವ ಚ್ತ್ರಣವನ್ನು ಕಲಾವಿದನು ಸಹಜವಾಗಿ ತನ್ನ ಜಾಣ್ಮೆಯಿಂದ ರೇಖಾ ಕೃತಿಯಿಂದ ಬಿಂಬಿಸಿದ್ದಾನೆ. ಇದನ್ನು ಚಿತ್ರ ರಚನೆಯ ಸಹಜ ಪ್ರಕ್ರಿಯೆ ಎಂದರೂ, ರೇಖೆಯನ್ನೇ ಚಿತ್ರವನ್ನಾಗಿ ಚಿತ್ರಿಸುವುದು ಜಾಣ್ಮೆಯೇ ಆಗಿದೆ. ಇದೇ ಚಿತ್ರಣದ ಭಾಗವಾಗಿರುವಂತಹ ಅರ್ಜುನ ಮತ್ಸ್ಯ ಯಂತ್ರವನ್ನು ದ್ರೌಪದಿಯ ಸ್ವಯಂವರದಲ್ಲಿ ಛೇದಿಸುವ ಚಿತ್ರಣವು- ಹೊಯ್ಸಳ ಕಾಲ ದಿಂದಲೇ ಜನಪ್ರಿಯವಾಗಿದ್ದು ಆ ಕಾಲದ ದೇವಾಲಯಗಳಲ್ಲಿ ಶಿಲ್ಪದ ರೂಪದಲ್ಲಿ ರಚಿಸಲಾಗಿದೆ. ಪ್ರಸ್ತುತದಲ್ಲಿಯೂ ಅದೇ ಕಥಾನಕವು ಸಂಯೋಜನೆಗೊಂಡಿದೆ. ಚಿತ್ರಣದ ರೇಖಾಪ್ರಧಾನವಾದ ರಚನೆಯು ಸಂಯೋಜನೆಗೆ ಪೂರಕವಾಗಿ ಬಿಂಬಿತವಾಗಿದೆ. ಅದೇ ರೀತಿಯಾಗಿ ಗಿರಿಜಾ ಕಲ್ಯಾಣದ ಚಿತ್ರಣವು ರೇಖಾಕೃತಿಗಳ ಸುಂದರವಾದ ರಚನೆಯಾಗಿದೆ. ಹಂಪಿಯ ಒಳಮಾಳಿಗೆಯ ದೃಶ್ಯಗಳನ್ನು ನಂತರದ ಭಿತ್ತಿ ಚಿತ್ರಗಳ ಪರಂಪರೆಗೆ ಮುನ್ನುಡಿಯೆಂದು ತಿಳಿಯಬಹುದು.

ವಿಜಯನಗರೋತ್ತರದ ಕಾಲದಲ್ಲಿ ಚಿತ್ರಕಲೆಯನ್ನು ಚಿತ್ರದುರ್ಗ, ಮೈಸೂರು, ತಂಜಾವೂರು ಮೊದಲಾದ ಕಡೆಗಳಲ್ಲಿ ನೋಡಬಹುದು. ಹಿರಿಯೂರಿನ ತೇರುಮಲ್ಲೇಶ್ವರ, ಶಿರಾದ ರೇವಣ ಸಿದ್ದೇಶ್ವರ, ಸಿಬಿಯ ನರಸಿಂಹಸ್ವಾಮಿ, ಮೈಸೂರಿನ ಶ್ವೇತವರಾಹಸ್ವಾಮಿ, ಪ್ರಸನ್ನಕೃಷ್ಣ ಹಾಗೂ ಪ್ರಸನ್ನ ವೆಂಕಟರಮಣಸ್ವಾಮಿ, ಮುಡುಕುತೊರೆಯ ಮಲ್ಲಿಕಾರ್ಜುನ, ಕೊಳ್ಳೆಗಾಲದ ರಾಮ ಮಂದಿರ, ಚಿಕ್ಕಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯ, ಶ್ರವಣಬೆಳಗೊಳದ ಜೈನಮಠ, ಕೊಡಗಿನ ನಾಕನಾಡು ಅರಮನೆ, ಉತ್ತರ ಕರ್ನಾಟಕದಲ್ಲಿ ಸುರುಪುರ, ನಿಪ್ಪಾಣಿ, ನರಗುಂದ, ಬಿ.ಕೆ ಹಳ್ಳಿ(ಈಗ ಸಂಪೂರ್ಣವಾಗಿ ನಾಶವಾಗಿದೆ) ಅಮ್ಮಿನಭಾವಿ ಮೊದಲಾದ ಕಡೆಗಳಲ್ಲಿ ಚಿತ್ರಕಲೆಯು ಚಿಕಣಿ ಚಿತ್ರಗಳ ಮೂಲಕವಾಗಿ ಹಾಗೂ ಭಿತ್ತಿಚಿತ್ರಗಳಾಗಿ ರಚನೆಗೊಂಡವು. ವಿಜಯನಗರೋತ್ತರ ಕಾಲದಲ್ಲಿ ಚಿತ್ರಕಲೆಯು ವಿವಿಧ ಆಯಾಮಗಳನ್ನು ಹೊಂದಿ ಬೆಳೆಯಿತು. ವಿಶೇಷವಾಗಿ ಹಂಪಿ ಪ್ರದೇಶದಲ್ಲಿದ್ದ ಕಲಾವಿದರುಗಳಲ್ಲಿ ಕೊಪ್ಪಳದ ಕಿನ್ನಾಳದಲ್ಲಿನ ಕಲಾವಿದರು ರೇಖಾ ಪ್ರಧಾನವಾದ ಚಿತ್ರಗಳನ್ನು ದೇವಾಲಯದ ಅಲಂಕಾರದಲ್ಲಿ, ಪಲ್ಲಕ್ಕಿ, ಮಣೆಗಳು ಇತ್ಯಾದಿ ಅಲಂಕಾರಿಕ ವಸ್ತುಗಳಲ್ಲಿ ಬಳಸಿಕೊಂಡಿರುವುದನ್ನು ಗಮನಿಸಬಹುದು.

ಮೈಸೂರು ಸಂಸ್ಥಾನದಲ್ಲಿ ಭಿತ್ತಿಚಿತ್ರಗಳ ಜೊತೆಯಲ್ಲಿ ಬಿಡಿಯಾದ ಪಾರಂಪರಿಕ ಚಿತ್ರಗಳ ರಚನೆಗೆ ಪ್ರೋತ್ಸಾಹ ನೀಡಲಾಗಿ, ಅದು ಒಂದು ಸಂಪ್ರದಾಯವಾಗಿ ಬೆಳವಣಿಗೆಯಾಗಿರುವುದನ್ನು ನೋಡಬಹುದು. ಅದನ್ನೇ ಮೈಸೂರು ಸಾಂಪ್ರದಾಯಕ ಚಿತ್ರಕಲೆಯಾಗಿ ಪ್ರಚುರಪಡಿಸಲಾಗಿದೆ..

ಈ ಕಲೆಯಲ್ಲಿಯೂ ಆಕೃತಿಗಳು ರೇಖಾಪ್ರಧಾನವಾಗಿವೆ. ಇದೇ ಕಾಲಘಟ್ಟದ ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ 'ಶ್ರೀತತ್ವ ನಿಧಿ' ಕೃತಿಯಲ್ಲಿನ ಎಲ್ಲ ಚಿತ್ರಗಳನ್ನು ಅರಮನೆಯ ಕಲಾವಿದರು ಕಥಾನಕದಂತೆ ರಚಿಸಿದ್ದಾರೆ. ಈ ಪುಸ್ತಿಕೆಯಲ್ಲಿ ಅದರ ಸಾಹಿತ್ಯಕ ವಿವರಣೆಗೆ ಪೂರಕವಾದ ದೃಶ್ಯಾಕೃತಿಗಳ ರಚನೆಯನ್ನು ಕಾಣಬಹುದು. ನಂತರದ ಕಾಲಘಟ್ಟದಲ್ಲಿಯೂ ಕಲೆಯನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವಲ್ಲಿ ಕಲಾ ಶಾಲೆಗಳ ಪಾತ್ರ ಹಿರಿದಾದದು. ಕಲಾ ಶಾಲೆಗಳಲ್ಲಿ ಸೇರುವ ವಿದ್ಯಾರ್ಥಿಗೆ ಮೊದಲು ಅಕ್ಷರಾಭ್ಯಾಸದ ರೀತಿಯಲ್ಲಿ ಹೇಳಿಕೊಡುವುದು ರೇಖಾಚಿತ್ರದ ಮೂಲ ಮಂತ್ರಗಳನ್ನು. ಅವುಗಳನ್ನು ಹಸ್ತಗತ ಮಾಡಿಕೊಂಡ ವಿದ್ಯಾರ್ಥಿ ನಿಧಾನವಾಗಿ ಮತ್ತು ಕ್ರಮವಾಗಿ ಚಿತ್ರಕಲೆಯ ವಿವಿಧ ಆಯಾಮಗಳನ್ನು ಅಧ್ಯಯನ ಮಾಡುತ್ತಾನೆ. ಪ್ರಾಯಶಃ ರೇಖಾ ಚಿತ್ರದ ಸೊಗಡು ಇಲ್ಲದವ ಕಲಾವಿದನಾಗಲು ಸಾಧ್ಯವೇ ಇಲ್ಲ ಎಂಬುದು ನಾಣ್ಣುಡಿಯಂತಾಗಿದೆ.

ರೇಖೆ-ರೇಖಾಚಿತ್ರ ಪಾರಂಪರಿಕವಾಗಿ ವೈವಿಧ್ಯಮಯವಾದ ಆಯಾಮಗಳನ್ನು ಹೊಂದಿ ಅಭಿವೃದ್ಧಿಯಾಗಿದೆ. ರೇಖೆ ಅರ್ಥಗರ್ಭಿತವಾಗಿ ಇಡೀ ಒಂದು ಪರಿಕಲ್ಪನೆಯನ್ನು ಬಿಚ್ಚಿಡಬಲ್ಲದು. ಹೆಬ್ಬಾರ್, ಪಿಕಾಸೋ, ಸೂಜಾ, ವೆಂಕಟಪ್ಪ ಮೊದಲಾದ ಕಲಾವಿದರು ಮೈಗೂಡಿಸಿಕೊಂಡಿದ್ದು ಇದೇ ತತ್ತ್ವವನ್ನು.

❑

## ದೃಶ್ಯಕಲೆ ಮತ್ತು ರೇಖಾಚಿತ್ರದ ಆಯಾಮಗಳು

# ಪರಂಪರೆ - ಸಮಕಾಲೀನತೆಗಳ ಮುಖಾಮುಖಿ

♦ ಕೆ.ವಿ. ಸುಬ್ರಹ್ಮಣ್ಯಂ

'We cannot think of a line without drawing it in thought, we cannot think of a circle without describing it. We cannot represent the three dimension of space at all without placing three lines perpendicular to each other at the same point and we cannot represent time... without... drawing a straight line.'

**Kant, in 'Critic of Pure Reason'**

ಚಿತ್ರಸೂತ್ರದ ಶ್ಲೋಕವೊಂದರಲ್ಲಿ 'ರೇಖೆ'ಗಳನ್ನು ಆಚಾರ್ಯರು ಮೆಚ್ಚುತ್ತಾರೆ... ಬಣ್ಣಗಳನ್ನು ಇತರರು ಮೆಚ್ಚುತ್ತಾರೆ" ಎಂಬ ಮಾತಿದೆ. 1969ರಲ್ಲಿ ಸಾಕ್ರೆಟೀಸ್–ಪ್ಲೇಟೋ–ಡೆರಿಡಾರವರುಗಳಿಗೆ ಸಂಬಂಧಿಸಿದಂತೆ 'ರೇಖೆ'ಯ ತಾತ್ವಿಕತೆಯನ್ನು ಎಳೆದಾಡಲಾಗಿದೆ. ('The History of Literature.' "The History - of Literature") ಅರಿಸ್ಟಾಟಲ್ ತನ್ನ 'De Anima'ನಲ್ಲಿ "ಸರಳ/ನೇರ ರೇಖೆ ಬಿಂದುವಿನೊಂದಿಗೆ ಅಥವಾ 'a unit having positions'ನೊಂದಿಗೆ ಪ್ರಾರಂಭವಾಗುತ್ತದೆ ಎಂದು



ಮುಂದುವರೆದು "A line is a point extended in space" ಎಂದಿದ್ದಾನೆ! ಸಮಯ ಅಥವಾ ಕಾಲವನ್ನು ಸರಳ ರೇಖೆಯಲ್ಲಿ ಕಾಣುವುದು ಇಷ್ಟವಿರಲಿಲ್ಲ. ಹಾಗಾಗಿಯೇ "The line in relation to time is not matter, but form" ಎಂದದ್ದು. ಈ ಅಭಿಪ್ರಾಯಗಳಿಗೆ ವಿಭಿನ್ನವಾಗಿ ಡೆರಿಡಾ "ರೇಖೆಯು ವೃತ್ತವೂ ಆಗಬಲ್ಲದು. ರೇಖೆ ಚಲನಶೀಲ ಅಸ್ತಿತ್ವವನ್ನು ಹೊಂದಿದೆ. ತನ್ನ ಚಹರೆಯನ್ನು ಒರೆಸಿಯೂ (erase) ಹಾಕಬಲ್ಲದು. ರೇಖೆಯು ವೃತ್ತಗಳಾಗಿ ಮುನ್ನಡೆಯಬಲ್ಲದು" ಎಂದಿದ್ದಾನೆ; "This is the limit of the line as presence; it can only trace the erasure of its own traces (gramme=line, trace)... The line, the linearization of the straight line, can only ease its own traces of the straight line, can only ease its own traces of difference of space becoming time and time becoming space." ಇದು ಜಾಣತನದ ತಾತ್ವಿಕ ಆಟ.

ಬಿಂದು, ರೇಖೆಗಳ ಕುರಿತು ಇಡೀ ವಿಶ್ವದ ದೃಶ್ಯಕಲಾ ರಂಗದ ಕೌತುಕವು ಇತಿಹಾಸ ಪೂರ್ವ ಕಾಲದಿಂದಲೇ ಅಲ್ಲದೆ ಇಂದಿಗೂ ಮುಂದುವರೆದಿದೆ. ಇದೊಂದು ನಿನ್ನೆ-ಇಂದು-ನಾಳೆಗಳ ಕಾಲಚಕ್ರ. ವಿಶ್ವದ ಹಲವೆಡೆ ಇರುವ ಗುಹೆ ಮತ್ತು ಶಿಲಾಶ್ರಯ ಚಿತ್ರಗಳಲ್ಲಿ (cave/rock art) ರೇಖೆ, ಬಿಂದು, ಬಣ್ಣಗಳ ಮೂಲ ಆಶಯ, ನಿರ್ವಹಣೆ ಒಂದೇ ಆಗಿದೆ. ರೇಖೆಗಳಲ್ಲಿ ಶಿಷ್ಟ-ಪರಿಶಿಷ್ಟ ಎನ್ನಲು ಸಾಧ್ಯವೆ? ಸಂಗೀತದಲ್ಲಿ 'ಬೃಹದ್ದೇಶೀ' ಇರುವಂತೆ, ಶಿಷ್ಟ ಸಂಗೀತವೂ ಇರುವಂತೆ. ಆದರೆ ಆದಿಮ, ಜನಪದ, ಸಂಪ್ರದಾಯ, ಸಮಕಾಲೀನ ಬಹುಮಾಧ್ಯಮ (multimedia), ರೇಖೆ, ರೂಪಗಳೂ ಮೂಲತಃ ಏಕತೆಯನ್ನೇ ಹೊಂದಿವೆ; ಕಾಲ/ದೇಶಗಳನ್ನು ಮೀರಿ ಒಂದೇ 'ಅಸ್ತಿತ್ವ'ವನ್ನು ಸಾಧಿಸಿವೆ; ವಿಭಿನ್ನತೆಯ ನಡುವೆಯೂ, ನಿರ್ವಹಣೆಯ ನಡುವೆಯೂ ಹೌದು.

ರಝಾ, ಡೆರಿಡಾ, ಸಾಕ್ರೆಟೀಸ್, ಕಾಂಟ್ ಮೊದಲಾದವರ ಬಿಂದು, ರೇಖೆಗಳ ವಾದ, ವಿವಾದಗಳೂ ಇವೆ; ಇವು ಹೆಬ್ಬಾರ್, ಹುಸೇನ್, ಬಿ.ಪಿ. ಬಾಯಿರಿಯಂಥವರ ಅಪೂರ್ವ ಬಿಂದು, ರೇಖಾಪ್ರೀತಿಯಲ್ಲಿಯೂ ಕಾಣಿಸಿಕೊಂಡಿದೆ. ಇಂದಿಗೂ ನಮ್ಮ ನಡುವೆ ಸಾವಿರಾರು ಕಲಾವಿದ, ಕಲಾವಿದೆಯರು ಈ ರೇಖೆಯ ಆಟ-ಮಾಟಗಳಲ್ಲಿ ತಲ್ಲೀನರಾಗಿದ್ದಾರೆ.

## ರೇಖೆಗಳ ತಾತ್ವಿಕ ಲೋಕ

ನಾವು ನೋಡುವ ಯಾವುದೇ ಚಿತ್ರ, ರೇಖಾಚಿತ್ರ, ಛಾಯಾಚಿತ್ರ ಇತ್ಯಾದಿಗಳೆಲ್ಲವೂ 'ಬಿಂದು' ಮತ್ತು ರೇಖೆಗಳ ಸಂಗ್ರಹಿತ ಸಂಯೋಜನೆಗಳೇ ಆಗಿವೆ. ರೇಖೆಯೊಂದು ಬಿಂದುಗಳ ಮೆರವಣಿಗೆಯ ಮಾಟವೇ ಹೌದು. ಹಾಗಾಗಿಯೇ ಪಾಲ್‌ಕ್ಲೇ "A line is a Dot went for a walk" ಎಂದದ್ದು. ಆದರೆ ಬಿಂದುವೊಂದು ನಮ್ಮ ಮನಸ್ಸಿನಲ್ಲಿ ಮೂಡದೆ, ಅದರ ಬಗ್ಗೆ ಧ್ಯಾನಿಸದೆ ಮೂಡಿಬರದು; ಅದನ್ನೇ 'ಶೂನ್ಯತಾ' ಎನ್ನಬಹುದು. ಮುಂದುವರೆದು ಬಿಂದುವೊಂದು ಮಹಾಬೀಜವೂ ಅಹುದು ಎಂದು ಹೇಳಬಹುದಲ್ಲವೆ!

## ಶೂನ್ಯತೆ

ಶೂನ್ಯವೆಂದರೆ 'ಖಾಲಿ' ಅಥವಾ 'ರಹಿತವಾದದ್ದು, ಪೊಳ್ಳು, ಸೊನ್ನೆ' ಇತ್ಯಾದಿ ಅರ್ಥಗಳಿವೆ.

ಹಿಂದೂ/ವೈದಿಕ ಧರ್ಮ ಚಿಂತನೆಯಲ್ಲಿ ಆಧ್ಯಾತ್ಮಿಕ ಸ್ಥಿತಿಯ ಕಲ್ಪನೆಯಾಗಿ ಶೂನ್ಯವು ಹಿಂದೂ 'ತಂತ್ರ'ಗಳಲ್ಲಿ ಅಸ್ತಿತ್ವ ಹೊಂದಿದೆ. ಶಿವಾಗಮ ಮತ್ತು ಕಾಶ್ಮೀರದ ಶೈವಧರ್ಮವನ್ನು ಶೂನ್ಯತೆಯ ವಿಕಾಸದ ಹಂತಗಳ ವರ್ಣನೆಗಳಾಗಿ ಗಮನಿಸಬಹುದು.

*ದುರ್ಬಲ ಬಿಂದು, ರೇಖೆಗಳು, ಸರಿಯಾಗಿ ವಿಭಾಗ ಮಾಡದಿರುವುದು, ಗಲ್ಲತುದಿ, ಕಣ್ಣುಗಳನ್ನು ಬಹಳ ದೊಡ್ಡದಾಗಿ ಬಿಂಬಿಸುವುದು, ದೇವತೆಗಳನ್ನು ಮಾನವರಂತೆ ಚಿತ್ರಿಸುವುದು ಚಿತ್ರದೋಷಗಳು. ರೇಖೆ, ಶೈಲಿ, ಬಣ್ಣ, ಆಕೃತಿ, ಯೋಜನೆ ಇವೆಲ್ಲಾ ಚಿತ್ರಿಸುವ ಪ್ರಕ್ರಿಯೆಯಲ್ಲಿ ಭೂಷಣವೆಂದು ತಿಳಿಯುವುದು (ಶ್ಲೋಕ 10). ರೇಖೆಯನ್ನು ಆಚಾರ್ಯರು, ನೆರಳು-ಬೆಳಕು ಸಂಯೋಜನೆಯನ್ನು ಮೇಧಾವಿಗಳು, ಆಕೃತಿ ಯೋಜನೆ ಯನ್ನು ಸ್ತ್ರೀಯರು, ಬಣ್ಣಗಳನ್ನು ಇತರರು ಮೆಚ್ಚುತ್ತಾರೆ.*



ದೃಶ್ಯಕಲೆಯಲ್ಲಿ ಶೂನ್ಯತೆಯ ಕಲ್ಪನೆಯು ಸೌಂದರ್ಯ ಮೀಮಾಂಸೆಯ ಅನುಭವದ ಸಂದರ್ಭ ಮತ್ತು ಸೃಷ್ಟಿಶೀಲತೆಯ ಪ್ರಕ್ರಿಯೆಯಲ್ಲಿ ಬಹು ಮುಖ್ಯವಾಗಿದೆ. ಚಿತ್ರಕಲಾಕೃತಿಯೊಂದು ಅಥವಾ ಸಂಯೋಜನೆಯೊಂದು ಕಲಾವಿದರ 'ಖಾಲಿ' ಮನಃಸ್ಥಿತಿಯಿಂದಲೇ ಹೊರಬರಬೇಕು.

ತಾಂತ್ರಿಕ ಬೌದ್ಧಧರ್ಮದ ಆಚರಣೆಯಲ್ಲಿ ಒಂದು ದೇವತೆಯನ್ನು ದೃಶ್ಯೀಕರಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ 'ಹೇವಜ್ರತಂತ್ರ'ದಲ್ಲಿ "ಮೊದಲು ಶೂನ್ಯದ ಸಾಕ್ಷಾತ್ಕಾರ ನಂತರ ಎಲ್ಲವೂ ಕೇಂದ್ರೀಕೃತವಾದ ಬೀಜದ ಸಂಗ್ರಹ, ಭೌತಿಕ ಅಭಿವ್ಯಕ್ತಿ ಮತ್ತು ನಾಲ್ಕನೆಯದಾಗಿ ವ್ಯಕ್ತಿಯು ಅಕ್ಷರವನ್ನು ಒಳಗೆ ಸೇರಿಸಬೇಕು" ಎಂದಿದೆ.

ದೇವತಾ ಶಿಲ್ಪವನ್ನು ರೇಖಿಸುವ, ಚಿತ್ರಿಸುವ ಅಥವಾ ಅದರ ರೂಪವನ್ನು ಅಂತರಂಗದ ಕಲ್ಪನೆಯಲ್ಲಿ ದೃಶ್ಯೀಕರಿಸುವಿಕೆಯ, ಎರಡೂ ಸೃಷ್ಟಿಶೀಲ ಪ್ರಕ್ರಿಯೆಗಳು ಒಂದೇ ಆಗಿರುತ್ತವೆ.

ಈ ಪ್ರಕ್ರಿಯೆಗಳು ಆರಂಭಗೊಳ್ಳುವುದೇ ಶೂನ್ಯ ಸ್ಥಿತಿಯಿಂದ, ಒಂದು ಚಿತ್ರವಾಗಲಿ, ಶಿಲ್ಪ, ವಾಸ್ತುಶಿಲ್ಪವೇ ಆಗಲಿ ಖಾಲಿ ಅವಕಾಶ(space)ದಿಂದ ರೂಪುಗೊಳ್ಳುತ್ತದೆ. ಈ ಅವಕಾಶವನ್ನು ಆನಂದಕುಮಾರ ಸ್ವಾಮಿಯವರು. ಆಕಾಶ, ಅಂತರಿಕ್ಷ, ಶೂನ್ಯ ಇತ್ಯಾದಿಯಾಗಿ ಕರೆದಿದ್ದಾರೆ. ಅಂದರೆ ಶೂನ್ಯ ಶಬ್ದವು, ಕಲ್ಪನೆಯು ಶೂನ್ಯದಿಂದ ನಿಷ್ಪನ್ನವಾಗಿದೆ. ವೈದಿಕ ಗುಣವಿಶೇಷವು ಪೂರ್ಣತೆಯ ಕಲ್ಪನೆಯಲ್ಲಿ ಕೇಂದ್ರೀಕೃತವಾಗಿದ್ದರೆ, ಬೌದ್ಧಧರ್ಮದ ಗುಣ ವಿಶೇಷವು ತನ್ನ ಕೇಂದ್ರಕಲ್ಪನೆಯನ್ನು ಶೂನ್ಯತಾದಲ್ಲಿ ಕಂಡುಕೊಂಡಿದೆ. ನಾಗಾರ್ಜುನನು 'ಯಾವುದೂ ಸತ್ಯವಲ್ಲ' ' ಎಲ್ಲವೂ ಶೂನ್ಯ' ಎಂದು ಹೇಳಿದ್ದಾನೆ. ಎಲ್ಲವೂ ಮಾಯೆ; ಖಾಲಿ ಪ್ರತಿಬಿಂಬ. ಸತ್ಯವೂ ಅಲ್ಲದ ಸುಳ್ಳೂ ಅಲ್ಲದೆ ಒಂದು ಕಲಾಕೃತಿಯು ಕಣ್ಣಿಗೆ ರಾಚುವಂತೆ ದಿಟ್ಟವಾಗಿ ಕಾಣುತ್ತದೆ. ಧಾರ್ಮಿಕ ಕಲೆಯು ಶೂನ್ಯತೆಯನ್ನು ಅರಗಿಸಿಕೊಂಡಿರುತ್ತದೆ.

## ಬಿಂದು

ವೇದಕಾಲದಲ್ಲಿ ಬಿಂದುವನ್ನು 'ಹನಿ', 'ಕಿಡಿ' ಮತ್ತು 'ಚಂದ್ರ'ನಿಗೆ ಸಂಬಂಧಿಸಿ ನೋಡಲಾಗಿದೆ. 'ಪ್ರಪಂಚ ಸಾರತಂತ್ರ'ದಲ್ಲಿ ಪರಮಸತ್ಯವಾದ ಪ್ರಕೃತಿಯು ಸಾರಭೂತವಾಗಿ ಪ್ರಜ್ಞೆಯಾಗಿದೆ. ಅದು

ಜ್ಯೋತಿಯೊಡನೆ ಸಂಪರ್ಕಕ್ಕೆ ಬಂದಾಗ ಸೃಷ್ಟಿಸುವ ಇರಾದೆಯನ್ನು ಹೊಂದುತ್ತದೆ. ಹೀಗೆ ಘನೀಕರಣಗೊಂಡು ತಾನು ಒಂದು ಬಿಂದುವಾಗುತ್ತದೆ ಎಂದು ಹೇಳಲಾಗಿದೆ.

ದೇವಾಲಯ ವಾಸ್ತುಶಿಲ್ಪ ಮತ್ತು ಪವಿತ್ರ ಮಂಡಲಗಳಲ್ಲಿ ಅಥವಾ ರಂಗೋಲಿಗಳಲ್ಲಿ ಬಿಂದುವು ಕೇಂದ್ರ ಬಿಂದುವಾಗಿದ್ದು ಅದರ ಮೂಲಕವೇ ಸಾಗುತ್ತದೆ. ಅದು ನಾನಾ ರೀತಿಗಳಲ್ಲಿ ತನ್ನನ್ನೇ ವಿಸ್ತರಿಸಿಕೊಳ್ಳುತ್ತದೆ.

ಮಧ್ಯಬಿಂದುವಾಗಿ ಅಭಿವ್ಯಕ್ತಗೊಳ್ಳುತ್ತದೆ. ಶಿಲ್ಪಪ್ರಕಾಶದಲ್ಲಿ ದೇವಾಲಯ ವಾಸ್ತುಶಿಲ್ಪದ ಗರ್ಭ ಬಿಂದುವಿನ ಕುರಿತು ವಿಶಿಷ್ಟ ವಿವರಗಳಿವೆ. ಅಭಿನವ ಗುಪ್ತನು ಬಿಂದುವನ್ನು "ಒಂದುಗೂಡಿಸುವ ಪ್ರಕ್ರಿಯೆ ಯಾಟ ಅನುಸಂಧಾನ" ಎಂದಿದ್ದಾನೆ. ಬಿಂದುವು ಕೇಂದ್ರ ಮತ್ತು ಅಂಚಿನ ರಾಜಕಾರಣದ ನಡುವೆ ಕೇಂದ್ರ ಬಿಂದುವಾಗಿ ಎಲ್ಲ ರಂಗಗಳಲ್ಲಿಯೂ ಇದೆ. ದೃಶ್ಯಕಲೆಗಳಲ್ಲಿ ಸೃಷ್ಟಿಶೀಲತೆಯಿಂದ ರೂಪುಗೊಂಡ ಒಂದು ಚುಕ್ಕಿಯಾಗಿದೆ. ಬಿಂದುವನ್ನು ಮೂಲವಾಗಿಸಿಕೊಂಡು ತಾಂತ್ರಿಕ ತಾತ್ವಿಕತೆಯ ಮೂಲದ ಹಲವು ಚಿತ್ರಕಲಾಕೃತಿಗಳೂ ಮೂಡಿಬಂದಿವೆ. ಬಹುಮುಖ್ಯವಾಗಿ ಕಾಶ್ಮೀರ, ಕೇರಳಗಳ ನಮ್ಮ ಸಮಕಾಲೀನ ಕಲಾವಿದರು 'ಬಿಂದು' ಮೂಲದ ಅಭಿವ್ಯಕ್ತಿಗಳಿಗೆ ಕಾರಣ ರಾಗಿದ್ದಾರೆ. ಇತಿಹಾಸಪೂರ್ವ ಗುಹಾಚಿತ್ರಲೋಕದಲ್ಲಿಯೂ ಬಿಂದುವಿನ ಹಾಜರಿ ಇದೆ.

## ಯಂತ್ರ, ತಂತ್ರಗಳ ರೇಖಾ ಲೋಕ

ಯಂತ್ರ/ತಂತ್ರಗಳ ರೇಖಾ ಚಿತ್ರಕಲಾರೂಪ ಪರಂಪರೆಯೂ ನಮ್ಮಲ್ಲಿ ಶಕ್ತಿಯುತವಾಗಿ ಬೆಳೆದು ಬಂದಿದೆ. ದೇವಾಲಯ ವಾಸ್ತುಮಂಡಲ, ಶ್ರೀಚಕ್ರ, ಇತ್ಯಾದಿಗಳೇ ಅಲ್ಲದ ಬೌದ್ಧ ಸಂಸ್ಕೃತಿ ಯಲ್ಲಿಯೂ ಯಂತ್ರಗಳ ಪರಂಪರೆ ಇಂದಿಗೂ ಮುಂದುವರೆದಿದೆ. ರೇಖೆ, ಬಿಂದು, ರೂಪ, ಬಣ್ಣಗಳ ವಿಶಿಷ್ಟ ಆಟ ಅದು; ದೃಶ್ಯಧ್ಯಾನವೂ ಸಹ.

## ಪರಂಪರೆಯ ಪಠ್ಯಗಳಲ್ಲಿ ರೇಖಾಲೋಕ

**ಚಿತ್ರಸೂತ್ರ**: ಭಾರತೀಯ ಕಲೆಗೆ ದೈವೀಕ ದೃಷ್ಟಿಕೋನವೇ ಅಲ್ಲದೆ/ಕರಕುಶಲತೆ ಲೌಕಿಕದ ಕಾಳಜಿಗಳೂ ಇವೆ. ಪ್ರಕೃತಿ, ಜೀವಜಾಲದ ನಡೆ, ಉಸಿರು, ಲಯ, ಚೇತನ, ರಸತತ್ವಗಳ ಉಪಯುಕ್ತ ಚಿತ್ರಿಸುವ ಕ್ರಮವು ಧಾರ್ಮಿಕ, ಲೌಕಿಕ ಆಯಾಮಗಳ ಉದ್ದೇಶ ಹೊಂದಿದೆ. ದೃಶ್ಯಲೋಕವು ವಾಸ್ತವಿಕ, ಶೈಲೀಕೃತ, ಅಮೂರ್ತ ಹಂತಗಳಲ್ಲಿ ವಿಸ್ತಾರಗೊಂಡಿದೆ. ಚಿತ್ರಸೂತ್ರದಲ್ಲಿ ವಿಭಿನ್ನ ಮಾನವ ಪ್ರಕಾರಗಳು, ದೇಹ ಪ್ರಮಾಣಗಳು, ಪ್ರಕಾರಗಳು ಮುಖಭಾವ ಭಂಗಿಗಳ ವಿವರಗಳಿವೆ. ಬಣ್ಣಗಳು, ಕುಂಚಗಳು, ಅವುಗಳ ತಯಾರಿಕೆ, ಅವುಗಳ ಲೇಪನದ ಗೋಡೆ, ಹಲಗೆ, ಬಟ್ಟೆ ಮೊದಲಾದ ಮಾಧ್ಯಮಗಳು, ಲೇಪನ ವಿಧಾನಗಳ ವಿವರಣೆ, ನಿಯಮಗಳಿವೆ. ರೇಖೆ, ಬಣ್ಣಗಳ ಬೆಳಕು, ಸಂಯೋಜನೆ ಪಾತಳಿ (ಜಜೂಣು), ಭಿನ್ನ ಆಯಾಮಗಳು, ವಿವಿಧ ದೇಶಕಾಲ, ಪ್ರಕೃತಿ, ಪಶುಪಕ್ಷಿ, ನೆಲ, ನೀರು, ಪರ್ವತ, ಮನಸ್ಸಿನ ರಸಭಾವಗಳು ಮೊದಲಾದ ವಿಷಯಗಳ ವಿವರಗಳಿವೆ.

ಬಹಳ ಮುಖ್ಯವಾಗಿ ರೇಖೆಗಳಿಗೆ ಸಂಬಂಧಿಸಿದಂತೆ ಪ್ರತಿಮಾ ಲಕ್ಷಣದ ವಿವರಗಳ ನಂತರ 39ನೆಯ 'ಕ್ಷಯವೃದ್ಧಿ' ಎಂಬ ಅಧ್ಯಾಯದಲ್ಲಿ (5, 6ನೆಯ ಶ್ಲೋಕದಲ್ಲಿ) 'ಋಜ್ವಾಗತ' ಎಂಬ ಚಿತ್ರ ಪ್ರಕಾರದ ಬಗ್ಗೆ ವಿವರಿಸುವಾಗ "ಪ್ರೇಕ್ಷಕರನ್ನು ಇದಿರಾಗಿ ನೋಡುವ ತನ್ನ ಪ್ರಮಾಣ ಹಾಗೂ

ಗುಣಗಳಲ್ಲಿ ಸ್ಪಷ್ಟತೆಯಿರುವ, ಸುಂದರ ತುಂಬುರೂಪದ, ನವಿರಾದ, ಕುಂದಿಲ್ಲದೆ ಲೇಪಿಸಿದ, ಲೋಪವಿಲ್ಲದ, ಮಧುರ, ಸ್ಪಷ್ಟ ರೇಖೆಗಳ ರೂಪಗಳಿಂದ ಅಲಂಕೃತವಾದ ಎಲ್ಲ ಅಂಶಗಳೂ ತುಂಬಿ ಕೊಂಡಿರುವ ನಿಲುವಿನ ಚಿತ್ರವನ್ನು 'ಋಜ್ವಾಗತ' (ನಿಲುವು) ಎನ್ನಲಾಗಿದೆ. ಹಾಗೆಯೇ 41ನೆಯ 'ರಂಗವರ್ತನಾ' ಅಧ್ಯಾಯದಲ್ಲಿ ಮೂರು ರೀತಿಯ ನೆರಳು ಬೆಳಕುಗಳ ನೋಟಗಳನ್ನು ಚಿತ್ರಿಸುವ ಶೈಲಿಗಳಿವೆ: 1. ಪತ್ರಕ, 2. ಬಿಂದುಕ, 3. ರೈಖಿಕ ಎಂದು. ಅಂದರೆ, (1) ಹೊಸೆದ ರೇಖೆಗಳಿಂದ ಬಿಡಿಸುವ/ಚಿತ್ರಿಸುವ ಶೈಲಿಗೆ ಪತ್ರವರ್ತನಾ, (2) ಬಿಂದುಗಳಿಂದ ಚಿತ್ರಿಸುವ ಶೈಲಿಗೆ ಬಿಂದುವರ್ತನಾ, (3) ಅತಿಸೂಕ್ಷ್ಮ ರೇಖೆಗಳಿಂದ ಬಿಡಿಸುವ ಶೈಲಿಗೆ ರೈಖಿಕ ವರ್ತನಾ ಎನ್ನಲಾಗಿದೆ.

### ಚಿತ್ರದೋಷಗಳು: (6, 7, 8ನೆಯ ಶ್ಲೋಕಗಳು)

ದುರ್ಬಲ ಬಿಂದು, ರೇಖೆಗಳು, ಸರಿಯಾಗಿ ವಿಭಾಗ ಮಾಡದಿರುವುದು, ಗಲ್ಲತುದಿ, ಕಣ್ಣುಗಳನ್ನು ಬಹಳ ದೊಡ್ಡದಾಗಿ ಬಿಂಬಿಸುವುದು, ದೇವತೆಗಳನ್ನು ಮಾನವರಂತೆ ಚಿತ್ರಿಸುವುದು ಚಿತ್ರ ದೋಷಗಳು. ರೇಖೆ, ಶೈಲಿ, ಬಣ್ಣ, ಆಕೃತಿ, ಯೋಜನೆ ಇವೆಲ್ಲಾ ಚಿತ್ರಿಸುವ ಪ್ರಕ್ರಿಯೆಯಲ್ಲಿ ಭೂಷಣವೆಂದು ತಿಳಿಯುವುದು (ಶ್ಲೋಕ 10). ರೇಖೆಯನ್ನು ಆಚಾರ್ಯರು, ನೆರಳು-ಬೆಳಕು ಸಂಯೋಜನೆಯನ್ನು ಮೇಧಾವಿಗಳು, ಆಕೃತಿ ಯೋಜನೆಯನ್ನು ಸ್ತ್ರೀಯರು, ಬಣ್ಣಗಳನ್ನು ಇತರರು ಮೆಚ್ಚುತ್ತಾರೆ. ಹಾಗಾಗಿ ಚಿತ್ರವು ಎಲ್ಲರಿಗೂ ಮೆಚ್ಚು ತರುವಂತೆ ಪ್ರಯತ್ನಪೂರ್ವಕವಾಗಿ ಚಿತ್ರಿಸಬೇಕು (ಶ್ಲೋ. 11, 12). ಚಿತ್ರವು ನಯವಾಗಿ ಮತ್ತು ಬಾಗಿದ ಸ್ಪಷ್ಟರೇಖೆಗಳಲ್ಲಿ ಮೂಡಬೇಕು; ಆಯಾ ದೇಶ, ವ್ಯಕ್ತಿಗಳ ವಿಶಿಷ್ಟ ವೇಷಭೂಷಣಗಳ ಬಗ್ಗೆ ಸರಿಯಾಗಿ ಅರಿತು ಅಂಗಪ್ರಮಾಣ, ಸೌಂದರ್ಯಗಳಿಗೆ ಕುಂದುಂಟಾಗದಂತೆ ಚಿತ್ರಿಸಿದ ಚಿತ್ರವು ಬಹಳ ಸುಂದರ (ಶ್ಲೋ. 15) ಎನ್ನಲಾಗಿದೆ. 43ನೆಯ ಅಧ್ಯಾಯದಲ್ಲಿ ಶೃಂಗಾರ ಮುಂತಾದ 'ರಸಭಾವ' ಎಂಬ ಅಧ್ಯಾಯದಲ್ಲಿ 9 ರಸಭಾವಗಳನ್ನು ಅರಿತ ಚಿತ್ರಕಾರ, ನುರಿತ ಚಿತ್ರಕಾರನ ಲಕ್ಷಣಗಳನ್ನೂ ತಿಳಿಸಲಾಗಿದೆ. 8 ಚಿತ್ರಗುಣಗಳು, ಅಯೋಗ್ಯಚಿತ್ರಗಳ ಬಗ್ಗೆ ಹೇಳಲಾಗಿದೆ. ನವರಸಗಳಲ್ಲಿ ಎಲ್ಲಾ ರಸಗಳ ಚಿತ್ರಗಳು ರಾಜರ ಸಭಾಗೃಹದಲ್ಲಿ ಚಿತ್ರಿಸಬೇಕು. ಅಮಂಗಲಕಾರಿ ದೃಶ್ಯಗಳು ದೇವಾಲಯ, ಅರಮನೆಗಳ ಹೊರತು ಬೇರೆ ಯಾವ ಮನೆಗಳಲ್ಲಿಯೂ ಚಿತ್ರಿಸಬಾರದು. ಮನೆಗಳಲ್ಲಿ ಮಂಗಳಕರರೆಂದು ಪ್ರಸಿದ್ಧರಾದವರ ಚಿತ್ರಗಳನ್ನು ಚಿತ್ರಿಸಬೇಕು ಎಂದಿದೆ.

ಚಿತ್ರದೋಷಗಳು: ದುರ್ಬಲ, ದಪ್ಪರೇಖೆ, ತಳವನ್ನು (space) ಸರಿಯಾಗಿ ವಿಭಾಗಿಸದಿರುವುದು. ದೊಡ್ಡ ಕೆನ್ನೆ, ತುಟಿ, ಕಣ್ಣುಗಳು, ವಕ್ರವಾದ ರೇಖೆಗಳು, ಬಣ್ಣಗಳ ಗೋಜಲು ಮಿಶ್ರಣಗಳು ದೋಷ ಗಳೆನ್ನಲಾಗಿದೆ. 9 ರಸಗಳಲ್ಲಿ ನಿರ್ದಿಷ್ಟ ರಸವನ್ನು 'ಹೀಗೇ' ಚಿತ್ರಿಸಬೇಕು ಎಂಬ ಸೂಚನೆಗಳಿವೆ. ಉದಾ: ಶಾಂತರಸದಲ್ಲಿ ತುಂಬಿದ ತಪಸ್ವೀಜನ, ಸೌಮ್ಯಕೃತಿ, ಧ್ಯಾನ, ಧಾರಣ ಆಸನಗಳಲ್ಲಿರುವುದು ಶಾಂತರಸದಲ್ಲಿರುತ್ತದೆ.

ಕೆಳದಿಯ ಬಸವರಾಜ ಸಂಕಲಿಸಿದ ಶಿವತತ್ವರತ್ನಾಕರ (ಸುಮಾರು ಕ್ರಿ.ಶ. 1668–1715)

6ನೆಯ ಕಲ್ಲೋಲದಲ್ಲಿ 2ನೆಯ ತರಂಗ

ಚಿತ್ರಿಸುವವರು ವಿದ್ವಾಂಸರೂ, ಭಾವತತ್ವಗಳನ್ನು ಬಲ್ಲವರೂ, ಸೂಕ್ಷ್ಮವಾದ ರೇಖೆಗಳನ್ನು ರೇಖಿಸ ಬಲ್ಲವರೂ ಆಗಿರಬೇಕು. ಕುಂಚದಿಂದ ಚಿತ್ರಿಸುವ (1) ಸ್ಥೂಲ, (2) ಮಧ್ಯ, (3) ಸೂಕ್ಷ್ಮ

ಎಂಬ ರೀತಿಗಳಿವೆ. ಇವು ಕುಂಚವನ್ನು ಬಳಸುವ ರೀತಿಗಳಿಂದ ಉಂಟಾಗಿರುವ ಬಗೆಗಳು. ರೇಖಾಚಿತ್ರದ ಬಗ್ಗೆ ವಿಶಿಷ್ಟ ವಿಷಯಗಳು ಅನ್ನಿಸುವುದಿಲ್ಲ.

## ರೇಖೆ ಮತ್ತು ಮನಶ್ಶಾಸ್ತ್ರೀಯ ಮುಖಗಳು

ರೇಖೆಯೊಂದರ ಮುಖ್ಯ ಆಶಯ(elements)ಗಳಾಗಿ ಆಕಾರ ಕಲ್ಪಿಸುವಿಕೆ (shape), ಬಣ್ಣ (colour), ಮೈವಳಿಕೆ (texture) ಮತ್ತು ರೂಪಿಸುವಿಕೆ(form)ಗಳನ್ನು ಗುರುತಿಸಬಹುದು. ಈ ಅಂಶಗಳಿಂದ ಮೂಡಿ ಬಂದ ರೇಖಾಕೃತಿಯೊಂದು ತನ್ನ ಚಲನಶೀಲತೆ (movement), ಲಯ (rhythm), ಅವಕಾಶ (space), ಆಳ (depth), ವೃದ್ಧಿಶೀಲತೆ, ಜೀವಂತಿಕೆ (growth), ಸಾಂಗತ್ಯ (harmony) ಮತ್ತು ವೈದೃಶ್ಯತೆ (contrast) ಸದ್ದು ಮತ್ತು ಶಾಂತತೆ (Noise and Calm)ಗಳೇ ಅಲ್ಲದೆ ಇನ್ನೂ ವೈವಿಧ್ಯಮಯ ಭಾವತರಂಗಗಳು ರೇಖಾಕೃತಿಯೊಂದನ್ನು ಕಲಾಕೃತಿಯನ್ನಾಗಿಸ ಬಲ್ಲವು. ಇಂತಹ ಕಲಾಕೃತಿಗಳಲ್ಲಿ ವಕ್ರರೇಖೆಗಳು (curved lines) ನೆಮ್ಮದಿ ಮತ್ತು ಆರಾಮ ದಾಯಕ ಅನುಭವ ನೀಡಿದರೆ ಸಮಾನಾಂತರ ರೇಖೆಗಳು (horizontal lines) ಶಾಂತತೆಯನ್ನು ಬಿಂಬಿಸುತ್ತವೆ. ಲಂಬವಾಗಿರುವ/ನಿಂತಿರುವ (vertical lines) ರೇಖೆಗಳು ಔನ್ನತ್ಯ ಮತ್ತು ಶಕ್ತಿಯುತ ಭಾವನೆಗಳಿಗೆ ಕಾರಣವಾಗುತ್ತವೆ. ಅಲುಗಾಡುವ (jogged lines) ಅಶಕ್ತ ರೇಖೆಗಳು ಸಂಕ್ಷೋಭೆ ಮತ್ತು ಆತಂಕಗಳನ್ನು ಬಿಂಬಿಸುತ್ತವೆ.

ಪೆರು ದೇಶದ ದಕ್ಷಿಣ ಮರುಭೂಮಿಯಲ್ಲಿ Nazca line ಗಮನಿಸಬಹುದು. ರೇಖಾ ಗಣಿತೀಯ ರೂಪ/ಪ್ರಾಣಿ, ಪಕ್ಷಿಗಳು ನಮ್ಮ ಮಂಡಲಗಳನ್ನು ಹೋಲುವ ರೇಖಾರೂಪಗಳು, ಮನುಷ್ಯರು, ನಿರಂತರ ರೇಖೆಗಳು ಇವೆ. ಇವು 300ಕ್ಕೂ ಹೆಚ್ಚಾಗಿವೆ; 660 ಅಡಿಗಳ ಅಳತೆಯ ರೂಪಗಳು ಇವೆ! ಧಾರ್ಮಿಕ ಪ್ರಾಮುಖ್ಯತೆ ಹೊಂದಿರುವ ನೆಲೆಗಳೂ ಇವೆ. ಪಕ್ಕದ ಗುಡ್ಡಗಳ/ಬೆಟ್ಟಗಳ ಮೇಲಿನಿಂದಲೂ ನೋಡಬಹುದಾದ ಭೂ-ರೇಖಾಚಿತ್ರಗಳಿವು.

ಇನ್ನು ನಾವು ರೇಖಿಸುವ ವಿಧಾನದಲ್ಲಿಯೇ ಆ ರೇಖೆಗಳು ನಮ್ಮ ಮನಸ್ಸಿನ ಒಳನೋಟಗಳನ್ನು, ಲಕ್ಷಣಗಳನ್ನು ಬಿಂಬಿಸಬಲ್ಲವು. bold lines ರೇಖೆಗಳು ಕಲಾವಿದನ ಶಕ್ತಿಯುತ ವೈಯಕ್ತಿಕ ಸತ್ವ ಮತ್ತು ಮನಸ್ಥಿತಿ ಪಿಕಾಸೋ, ಹುಸೇನ್, ಹೆಬ್ಬಾರ್, ಆರ್.ಎಂ. ಹಡಪದ್, ಎಂ.ಬಿ. ಪಾಟೀಲ್, ವಿ.ಜಿ. ಅಂದಾನಿ, ಮೊದಲಾದವರು ಇಲ್ಲಿ ನೆನಪಾಗುತ್ತಾರೆ. Mechanical/ಯಾಂತ್ರಿಕ/ಬಾಗದ ರೇಖೆಗಳು (ಅನಮ್ಯ) ಕಾಠಿಣ್ಯ ಮತ್ತು ನಿಯಂತ್ರಣಗಳನ್ನು ಬಿಂಬಿಸುತ್ತವೆ. Thick ದಟ್ಟ ರೇಖೆಗಳು ಶಕ್ತಿಯುತತೆ, ದಿಟ್ಟತೆಯನ್ನು ಬಿಂಬಿಸುತ್ತವೆ. ತೆಳು (thin lines) ರೇಖೆಗಳು ಕೋಮಲತೆಯನ್ನು, ಮುರಿದ, ಹರಿದ (broken lines) ರೇಖೆಗಳು ಕ್ಷಣಭಂಗುರ, ಅಲ್ಪಕಾಲೀನ, ನಶ್ವರತೆಯ ಒಳ ನೋಟ ನೀಡಬಲ್ಲವು. Continuous lines/ನಿರಂತರ ಚಲನಶೀಲ ರೇಖೆಗಳು ನೋಡುವ ಕಣ್ಣುಗಳನ್ನು ನಿರ್ದಿಷ್ಟ ಉದ್ದೇಶಗಳತ್ತ ನಿರ್ದೇಶಿಸಬಲ್ಲವು. ಹಾಗೆಯೇ, ನಮ್ಮ 'ನೋಟಬಿಂದು' ಬದಲಾದಂತೆ ರೇಖಾರೂಪವೊಂದರ ಕೋನ ಮತ್ತು ಬಾಗುಗಳು ಬದಲಾಗುತ್ತವೆ. ಇಲ್ಲಿ ನಾವು perspective/ ದೃಗ್‌ದರ್ಶನ ತಂತ್ರ ಬಳಸುತ್ತೇವೆ.



ಚೌಕ (squqre) ಮತ್ತು ಆಯತ(rectangle)ಗಳು ಶಕ್ತಿ ಮತ್ತು ಸ್ಥಿರತೆಯನ್ನು ಬಿಂಬಿಸುತ್ತವೆ. ವೃತ್ತ (circle) ಮತ್ತು ಅಂಡವೃತ್ತ (ellipses) ನಿರಂತರ ಚಲನೆಯನ್ನು ಬಿಂಬಿಸುತ್ತವೆ. ತ್ರಿಭುಜಗಳು (triangles) ನೋಡುವ ಕಣ್ಣುಗಳನ್ನು ಮೇಲ್ಮುಖವಾಗಿ ಚಲಿಸುವಂತೆ ಮಾಡುತ್ತವೆ. ಗೋಪುರ, ಶ್ರೀಚಕ್ರ, ಪಿರಮಿಡ್ ರೇಖಾ ರೂಪಗಳು ಇಲ್ಲಿ ನೆನಪಾಗುತ್ತವೆ; ಸ್ವರ್ಗಕ್ಕೆ ಕಿಟಕಿ!? ತಲೆಕೆಳಗಾದ ತ್ರಿಭುಜಗಳು ಆತಂಕ ಮತ್ತು ಅಸಮತೋಲನ ಸ್ಥಿತಿಯನ್ನು ಬಿಂಬಿಸುತ್ತವೆ.

## ರೇಖಾಚಿತ್ರ ವಿಶೇಷ

ರೇಖೆಯ ಚಲನಶೀಲತೆಗೆ (line as movement) ಜಪಾನಿನ ಪ್ರಿಂಟ್‌ಮೇಕರ್, "The great wave of Kanagawa, 1823-29, 36 views of mount Fujiyama" Wood Block printನ ನದಿಯ ನೀರಿನ ಉಬ್ಬರ ಇಳಿತಗಳ ವೈಭವ ನೆನಪಾಗುತ್ತದೆ. Line as emotionಗೆ ಪಾಬ್ಲೋ ಪಿಕಾಸೋನ (1881–1973) Weeping Woman, 1937, ತೈಲವರ್ಣ ಕೃತಿ ಗಮನಿಸಿ. Guernica ಸಹ ಉತ್ತಮ. Line as formಗೆ ತಂತಿ, ರೇಖೆ ಬಳಸಿ ರೂಪಿಸುವ ನಾರಾಯಣ

ಸೂತ್ರದಾರರ ಶಿಲ್ಪಗಳು ಮತ್ತು Alexander Calder(1898-1976)ನ ಶಿಲ್ಪಗಳು ಉದಾಹರಣೆಯಾಗಬಲ್ಲವು. Line as abstractionಗೆ ಪಿಕಾಸೋನ Bull Plate 11, Jan. 17, 1946 (lithography) ಉತ್ತಮ ಉದಾಹರಣೆ.

ಇದು 'Abstraction'ಗೆ 'ಮಾಸ್ಟರ್ ಕ್ಲಾಸ್' ಎಂದು ಹೇಳಲಾಗುತ್ತದೆ. 1945ರಲ್ಲಿ 'Bull' ಶೀರ್ಷಿಕೆಯ ಹನ್ನೊಂದು lithographs ಸೃಷ್ಟಿಸಿದನು. ಒಂದು ರೀತಿಯಲ್ಲಿ "Academic to the abstraction" ವರೆಗಿನ ಪಯಣದಂತೆ. ಮೊದಲ ಪ್ರಿಂಟ್ ಅನ್ನು ಬ್ರಷ್‌ನಿಂದ ರೇಖಿಸಿ realistic ಆಗಿ ಪ್ರಾರಂಭಿಸಿ ನಂತರ 11ನೆಯ ಪ್ಲೇಟ್‌ವರೆಗೂ ರೇಖಾಚಿತ್ರಗಳಲ್ಲಿ 'Bull' ಪ್ರಕ್ರಿಯೆ ರೇಖಾರೂಪಾಂತರಗೊಂಡಿತು. ಅಂತಿಮ 11ನೆಯ ಪ್ಲೇಟ್‌ನಲ್ಲಿ Bull ಸರಳ/ವಿಶಿಷ್ಟ ರೇಖಾರೂಪವಾಗಿ ಕಾಣಿಸಿಕೊಂಡಿತು. ಪಿಕಾಸೋ ಒರಟು ಪ್ರಾಣಿಯ ಆತ್ಯಂತಿಕ/ultimate ಸತ್ವವನ್ನು ಕಂಡುಕೊಂಡನು. Bull ಅನ್ನು ರೂಪಕದಂತೆ ಕಂಡ ಅರ್ಥವನ್ನು ಹೇಳಹೋಗಲಿಲ್ಲ; Context ಹಿನ್ನೆಲೆಯಲ್ಲಿಟ್ಟು ನೋಡಿದ್ದಾನೆ. ಈ ಅಭಿವ್ಯಕ್ತಿಯನ್ನು ಸ್ಪೈನ್ ಜನರ ಪ್ರಾತಿನಿಧ್ಯತೆಯಂತೆ, fascism ಮತ್ತು ಹಿಂಸೆಯ ಮೇಲಿನ ಟೀಕೆಯಂತೆ, ಪೌರುಷತ್ವದ ಅಥವಾ ತನ್ನದೇ 'ಸ್ವಭಾವರೂಪ'ದ ಪ್ರತಿಫಲನದಂತೆಯೂ ಕಂಡಿರುವುದಾಗಿ ಪಿಕಾಸೋ ಹೇಳಿಕೊಡಿದ್ದಾನೆ.

ಇತಿಹಾಸಪೂರ್ವ rock/cave artನ ಮೂಲವೇ ಬಿಂದು ಮತ್ತು ರೇಖೆಗಳು. ರಾಯಚೂರು, ಬಳ್ಳಾರಿ, ಕೋಲಾರ ಜಿಲ್ಲೆಗಳ ಹಲವಾರು ನೆಲೆಗಳ ರೇಖಾಚಿತ್ರಗಳು 2015ರ ಸಂದರ್ಭದಲ್ಲಿಯೂ ನೋಡಬಹುದಿತ್ತು. ಈ ಪಟ್ಟಿಗೆ ಇತ್ತೀಚೆಗೆ ಟೇಕಲ್, ಕಂಗುಂದಿ, ರಾಯದುರ್ಗ, ಘಟ್ಟಮಾದಮಂಗಲ ಸೇರ್ಪಡೆಗೊಂಡಿವೆ. ಬಾದಾಮಿಯ ಸೀತೆ ದೋಣಿಯ ಕಂಗಾವಿ, ಕಪ್ಪು ರೇಖಾದೃಶ್ಯಲೋಕ ಅಪೂರ್ವವಾಗಿದೆ. ಎಡಕಲ್ ಗುಹೆಗಳ ಕೊರೆದ ರೇಖಾಚಿತ್ರಗಳು ಸುಂದರವಾಗಿವೆ. ಆ ಜನರಿಗೆ ಬೇಟೆಯ ಆಯುಧಗಳನ್ನು ಚೂಪುಗೊಳಿಸುವ ಕಾಲಕ್ಕೆ ಮೂಡಿ ಕಾಣಿಸಿಕೊಂಡ ಅನಿರೀಕ್ಷಿತ ರೇಖೆಗಳೂ ಕೌತುಕ ಉಂಟುಮಾಡಿರುವ ಸೂಚನೆಗಳವೆ. ಹಿರೆಬೆನಕಲ್ ಬಂಡೆಗಳ ಮೇಲೆ ಹೀಗೆ ಕೊರೆದ ರೇಖೆಗಳವೆ. ಗುಹೆಗಳಲ್ಲಿ ಕೆಂಗಾವಿ ಬಣ್ಣದ ರೇಖಾಚಿತ್ರಗಳೂ ಇವೆ.

ಪೆರು ದೇಶದ ದಕ್ಷಿಣ ಮರುಭೂಮಿಯಲ್ಲಿ Nazca line ಗಮನಿಸಬಹುದು. ರೇಖಾ ಗಣಿತೀಯ ರೂಪ/ಪ್ರಾಣಿ, ಪಕ್ಷಿಗಳು ನಮ್ಮ ಮಂಡಲಗಳನ್ನು ಹೋಲುವ ರೇಖಾರೂಪಗಳು, ಮನುಷ್ಯರು, ನಿರಂತರ ರೇಖೆಗಳು ಇವೆ. ಇವು 300ಕ್ಕೂ ಹೆಚ್ಚಾಗಿವೆ; 660 ಅಡಿಗಳ ಅಳತೆಯ ರೂಪಗಳು ಇವೆ! ಧಾರ್ಮಿಕ ಪ್ರಾಮುಖ್ಯತೆ ಹೊಂದಿರುವ ನೆಲೆಗಳೂ ಇವೆ. ಪಕ್ಕದ ಗುಡ್ಡಗಳ/ಬೆಟ್ಟಗಳ ಮೇಲಿನಿಂದಲೂ ನೋಡಬಹುದಾದ ಭೂ-ರೇಖಾಚಿತ್ರಗಳವು. ಆಕಾಶದಿಂದ ದೇವತೆಗಳು ನೋಡಲೆಂದು Nazca ಜನರು ಸೃಷ್ಟಿಸಿದ ರೇಖಾರೂಪಗಳವು (ಕ್ರಿ.ಪೂ. 200ರಿಂದ 600 ಅವಧಿಯವು) ಎಂಬ ನೋಟವೂ ದಾಖಲುಗೊಂಡಿದೆ.

ಇತಿಹಾಸ ಕಾಲದ ಅಜಂತಾ, ಎಲ್ಲೋರಾ, ಬಾದಾಮಿ, ಐಹೊಳೆಗಳಲ್ಲಿ ಹಂಪೆ, ಲೇಪಾಕ್ಷಿಗಳಲ್ಲಿ, ಮೈಸೂರು ಅರಸರ ಕಾಲದ ಹಲವು ದೇವಾಲಯ ಭಿತ್ತಿಚಿತ್ರಗಳ ರೇಖಾವೈಭವ ಗಣನೀಯವಾಗಿದೆ. ಚಿತ್ರಾಲಂಕೃತ ಹಸ್ತಪ್ರತಿಗಳಾದ ಮೂಡುಬಿದರೆಯ ದವಳ ಮತ್ತು ಮಹಾದವಳ, ಶ್ರೀತತ್ವನಿಧಿ, ಸೌಗಂಧಿಕಾಪರಿಣಯ, ವೃಷಭೇಂದ್ರ ವಿಳಾಸ ಮೊದಲಾದವುಗಳಲ್ಲಿ ನಮ್ಮ ಸಂಪ್ರದಾಯ ಕರಕುಶಲಗರ ವಿಶಿಷ್ಟ ರೇಖಾಚಿತ್ರವೈಭವವಿದೆ. ಸಂಪ್ರದಾಯ ಚಿತ್ರಕಲಾವಿದರ ಮೈಸೂರು,

ಸುರಪುರ ಇತ್ಯಾದಿ ಚಿತ್ರಗಳಲ್ಲಿ ರೇಖಾ ಪರಿಣತಿ ಸುಂದರ. ನವೋದಯ ಸಂದರ್ಭದ 20ನೆಯ ಶತಮಾನದ ರವೀಂದ್ರನಾಥ ಠಾಕೂರ್, ಮೈಸೂರಿನ ಸಿದ್ಧಲಿಂಗಸ್ವಾಮಿ, ಕೆ. ವೆಂಕಟಪ್ಪ, ಆರ್.ಎಸ್. ನಾಯ್ಡು, ಹುಸೇನ್, ಹೆಬ್ಬಾರ್, ಆರ್.ಎಂ. ಹಡಪದ್, ಎಂ.ಎ. ಚಿಟ್ಟಿ ಮೊದಲಾದವರ ರೇಖಾರೂಪ ವೈಖರಿ, ನಿರ್ವಹಣೆ ಅಧ್ಯಯನ ಯೋಗ್ಯ.

## ಸಮಕಾಲೀನ ಸಂದರ್ಭ

ನಮ್ಮ ಉಸಿರು ಹೃದಯಬಡಿತಗಳ ಆಟಗಳೂ ಬಿಂದು, ರೇಖೆಗಳಲ್ಲಿ ದಾಖಲುಗೊಳ್ಳುತ್ತಿರುವುದೇ ಅಲ್ಲದೆ, ಇಂದು ಪ್ರದರ್ಶನಗೊಳ್ಳುತ್ತಿರುವ ಕಾಲವೇ ನಮ್ಮದು. ಚಲನಶೀಲತೆ, ಗಾಳಿಯ ವೇಗ, ಆವೇಗ, ಬೆಂಕಿಯ ಪ್ರಖರತೆ, ನೃತ್ಯ, ಶಬ್ದ, ಸಂಗೀತಗಳೂ ಇಂದಿನ ಡಿಜಿಟಲ್/digital ಸಂದರ್ಭ, ರೇಖೆಗಳ ಚಲನೆಯಲ್ಲಿ ದಾಖಲುಗೊಳ್ಳುತ್ತಿವೆ. ಛಾಯಾಚಿತ್ರಗಳಿಂದ ತಾಂತ್ರಿಕವಾಗಿ ಬಿಂದು ರೇಖಾರೂಪಗಳನ್ನು ಪ್ರತ್ಯೇಕಿಸಿ ಹೊರತೆಗೆದು ಆನಂದಿಸಿದವರು ಪೂರ್ಣಚಂದ್ರ ತೇಜಸ್ವಿ.

ಪರಂಪರೆಯ ಬೇರುಗಳ ರೇಖೆಗಳಲ್ಲಿ ಸಮಕಾಲೀನತೆ ಸಾಧಿಸಲಾಗುವುದೆ? ಸೃಜನಶೀಲತೆ ರೇಖೆಗಳಲ್ಲಿ ಹೇಗೆ ಸಾಧ್ಯ? ಪ್ರಸ್ತುತ ಸಂದರ್ಭದ ಗಡಿಬಿಡಿ, ಗೊಂದಲ, ಸಂಕೀರ್ಣ ಅನುಭವಗಳನ್ನು ರೇಖೆಗಳಲ್ಲಿ ಅಭಿವ್ಯಕ್ತಿಸಿದರೆ ಹೇಗೆ? ಎಂಬ ಪ್ರಶ್ನೆಗಳ ಹಿನ್ನೆಲೆಯಲ್ಲಿ ಸೃಜನಶೀಲರಿಗೆ ರೇಖೆಯಷ್ಟು ನೆರವು ನೀಡಿದ ಮಾಧ್ಯಮ ಇನ್ನೊಂದಿಲ್ಲ. ಹಾಗಾಗಿಯೇ ರೇಖೆಯನ್ನು ಚೆನ್ನಾಗಿ ಬಲ್ಲವರು ಪ್ರಿಂಟ್ ಮಾಧ್ಯಮಕ್ಕೆ ಜಿಗಿದದ್ದು. ನಮ್ಮ ಹಲವು ಸಂವೇದನಾಶೀಲರು ಪ್ರಿಂಟ್ ಮಾಧ್ಯಮದಲ್ಲಿ ಅಭಿವ್ಯಕ್ತಿಸಿದ್ದು ಗಮನಾರ್ಹ. ಎಂದಿಗೂ ರೇಖೆಗಳು ರೇಖೆಗಳೇ ಆಗಿದ್ದರೂ ಅವುಗಳನ್ನು ದುಡಿಸಿ ಕೊಳ್ಳುವ ಸಂದರ್ಭ. ಉದ್ದೇಶದ ಕಾರಣಕ್ಕೆ ಅವು ಹೊಸ ಹೊಸ ರೀತಿಯಲ್ಲಿ ಕಾಣಬಲ್ಲವು. ಎಡ್ವರ್ಡ್ ಮಂಕ್‌ನ 'ಕ್ರೈ.' ನಮ್ಮ ಸಂಪ್ರದಾಯ ಕಲಾವಿದರು, ಸಂಪ್ರದಾಯ ಶಿಲ್ಪಿಗಳು 7 ಸಾಗರಗಳನ್ನು ಒಂದು ಅಡಿ ಅವಕಾಶದಲ್ಲಿ ರೇಖಿಸಿ (ಕಲ್ಪಿಸಿ) ಅಭಿವ್ಯಕ್ತಿಸಿದ ರೀತಿ ಇಂದಿಗೂ ಅಧ್ಯಯನಯೋಗ್ಯ. ಹಾಗೆ ನೋಡಿದರೆ ಇಂದು ಬಹುತೇಕ ಪರಂಪರೆಯ ಮೂಲದ ಚಿತ್ರ, ಶಿಲ್ಪ ಪ್ರಕಾರಗಳಲ್ಲಿಯೇ 'ರೇಖೆ'ಯು 'ನಿಜವಾಗಿಯೂ ಕಾಣಿಸಿಕೊಳ್ಳುತ್ತಿರುವುದು. ಮೈಸೂರು, ಸುರಪುರ ಇತ್ಯಾದಿ ಶೈಲಿಯ ಚಿತ್ರಕಾರರು ಇಲ್ಲಿ ನೆನಪಾಗುತ್ತಾರೆ.

ಯಾರನ್ನೋ ಒಪ್ಪಿಸುವ ಸಂದರ್ಭ/ಉದ್ದೇಶವೆಂಬಂತೆ ಕೆಲವರು, ಹಿರಿಯ ಕಲಾವಿದರೂ ತಮ್ಮ ರೇಖಾಚಿತ್ರ ಪರಿಣಿತಿಯನ್ನು ತೋರಲು ಯತ್ನಿಸಿದ್ದೂ ಉಂಟು! ಈ ಹಿನ್ನೆಲೆಯಲ್ಲಿಯೇ ನಮ್ಮ ಹಿರಿಯ ಒಬ್ಬಿಬ್ಬರು ಕಲಾವಿದರ ರೇಖಾಕೃತಿಗಳ ಪ್ರದರ್ಶನ ನಡೆದಿದೆ. 1990ರ ದಶಕದಲ್ಲಿಯೇ ವೆಂಕಟಪ್ಪ ಗ್ಯಾಲರಿಯಲ್ಲಿ ಖಾಸಗೀ ಪ್ರಾಯೋಜಕತ್ವದಲ್ಲಿ ಎಂ.ಆರ್. ಹಡಪದ್ ತಮ್ಮ ರೇಖಾ ಚಿತ್ರಗಳ ಬೃಹತ್ ಪ್ರದರ್ಶನವನ್ನು ನಡೆಸಿದ್ದರು. ಸಹಜವಾಗಿಯೇ ನಡೆದ ಪ್ರಕ್ರಿಯೆ ಅದು. ಅವರು ಆಯೋಜಕರಿಗೆ ದುಂಬಾಲು ಬಿದ್ದಿರಲಿಲ್ಲ. ಆದರೆ 2015ರಲ್ಲಿ ಬಹುತೇಕ ಯಾವೊಬ್ಬ ಕಲಾವಿದರೂ ಪರಿಪೂರ್ಣ 'ರೇಖಾಚಿತ್ರ' ಕಲಾಪ್ರದರ್ಶನ ನಡೆಸಲು ಉತ್ಸಾಹ ತೋರಿದಂತೆ ಕಾಣಲಿಲ್ಲ. ಸಮಕಾಲೀನ ಕಲಾವಿದರ ಕೃತಿಗಳಲ್ಲಿ ರೇಖೆಗಳು ಸವಾಲಿನಂತೆ ಕಾಣಿಸಿಕೊಳ್ಳುತ್ತಿವೆಯೇ? ಎಂಬ ಪ್ರಶ್ನೆಯೂ ಇದೆ.

## ಕೆ.ಜಿ. ಸುಬ್ರಮಣಿಯನ್‌ರವರ ರೇಖೆ ಕುರಿತಂತೆ ಅಭಿವ್ಯಕ್ತಿಗಳು

ಭಿತ್ತಿಚಿತ್ರ, ಭಿತ್ತಿಶಿಲ್ಪ, ವರ್ಣಚಿತ್ರ, ಸಾಂದರ್ಭಿಕ ಚಿತ್ರಗಳೆಲ್ಲವೂ ರೇಖೆಗಳನ್ನೆ ಮೂಲಸತ್ವದಂತೆ ದುಡಿಸಿಕೊಂಡಿವೆ. 2015ರಲ್ಲಿಯೂ ಅದು ಮುಂದುವರೆದಿದೆ. ಅದು ರೇಖೆಗಳನ್ನು ಕಥೆ ಹೇಳುವ, ಸಂದರ್ಭಗಳನ್ನು ವಿಡಂಬಿಸಿ, ಕೊಂಕಿಸಿ, ಪ್ರಶ್ನಿಸಿ ಅಲುಗಾಡಿಸುವಂತೆಯೂ ಮಾಡುತ್ತದೆ. ಹಾಗಾಗಿ ಅವು ನಮ್ಮ ಆದಿಮ ಕಲಾವಿದರ, ಜಾನಪದೀಯ ಪರಂಪರೆಯ ಸಮಕಾಲೀನ ಮರುಹುಟ್ಟಿನಂತೆ ಅವು ಕಾಣುತ್ತಿವೆ. ಅವರ 'ಪಕ್ಷಿಗಳ ಆತ್ಮಗಳು ಮತ್ತು ಚರ್ಮಸುಲಿದ ಎಮ್ಮೆ' (2013), 'ಮಾತಾಡುವ ವೃಕ್ಷ' (2013) ಇವೆಲ್ಲವೂ ನಮ್ಮ ಸಂದರ್ಭವನ್ನು ವಿಡಂಬಿಸುವ ಅಬಿವ್ಯಕ್ತಿಗಳೇ ಆಗಿವೆ. ಇಲ್ಲೆಲ್ಲಾ ಬಣ್ಣಗಳು 'ಭಾವನೆಗಳಿಗೆ' ನೆಪವಾಗಿ ಕಾಣಿಸಿಕೊಂಡಿವೆ; ರೇಖೆಗಳೇ ವೈಭವೀಕೃತಗೊಂಡ ಚಿತ್ರಕೃತಿಗಳು ಇವು. ಕೆ.ಜಿ.ಎಸ್. ನಮ್ಮ ಸಂದರ್ಭದ ರೂಪಾಂತರಗೊಂಡ ಆದಿಮ ಸತ್ವಗಳ (Contemporary Primitive) ಕಲಾವಿದರೇ ಸರಿ. ಒಂದೆಡೆ, ಕೆ.ಜಿ. ಸುಬ್ರಮಣಿಯನ್‌ರವರು ಪಿಕಾಸೋನ 'ಆದಿಮ ಪ್ರಜ್ಞೆ', 'ಸಂಪ್ರದಾಯ' ಕಲಾವಿದರ ಕಲ್ಪನಾ ಸಾಮರ್ಥ್ಯ, ಕುಶಲತೆಗಳನ್ನು ಪ್ರಸ್ತಾಪಿಸುತ್ತಾರೆ. ಹೆಬ್ಬಾರ್ ತಮ್ಮ ಪುಟ್ಟಮಗಳು ಸುಲಲಿತವಾಗಿ ರೇಖಿಸುತ್ತಿದ್ದುದನ್ನು ಕಂಡು 'ಮರುಹುಟ್ಟು' ಪಡೆದೆನೆಂದು ಹೇಳಿಕೊಂಡಿದ್ದಾರೆ. ಹಾಗಾಗಿಯೇ ಅಲ್ಲದೆ ನಮ್ಮ ಇಂದಿನ ಅಗತ್ಯ ವಾಗಿಯೂ ನಮಗೆ ನಮ್ಮ ಆದಿಮ ಕಲಾವಿದರೇ ಅಲ್ಲದೆ ಜನಪದ, ಸಂಪ್ರದಾಯ ಕಲಾವಿದರ ಕಲ್ಪನೆ, ಕುಶಲ ರೇಖಾ ಕಲ್ಪನೆಗಳಿಂದಲೂ ಪ್ರೇರಣೆ ಪಡೆಯಬೇಕಾದ/ಬಹುದಾದ ಅಗತ್ಯ ಹಿಂದಿಗಿಂತಲೂ ಅವರೆಲ್ಲರಿಗಿಂತಲೂ ಹೆಚ್ಚಾಗಿದೆ ಎಂದು ಅನ್ನಿಸುತ್ತಿದೆ.

*ಬಿಂದು*
*ಆರಂಭವೂ ಇದೆ*
*ಇಲ್ಲ*
*ಅಂತ್ಯವೂ ಇದೆ*
*ಇಲ್ಲ*
*ಬಿಂದುವಿಗೆ ಮೊದಲು*
*ಶೂನ್ಯ*
*ಅಂತ್ಯ?!*
*ರೇಖೆ*
*ಅದರೂ ಆರಂಭ,*
*ಆರಂಭವಾಗದ ರೇಖೆ*
*ಅಂತ್ಯವಾದರೂ*
*ಅಂತ್ಯವೇ ಆಗದ ರೇಖೆ*
*ಅದೊಂದು ನಿರಂತರ*
*ರೇಖಾ ಪಯಣ?*

❑

# ರೇಖಾಚಿತ್ರದ ಸೊಗಸು ಮತ್ತು ಮೌಲ್ಯ

♦ ರಾಜಶೇಖರ ಬಿಲ್ವಪತ್ರಿ

ಅಭಿವ್ಯಕ್ತಿಯ ಸಹಜ ಪ್ರಕ್ರಿಯೆಯಲ್ಲಿ ಅನೇಕ ಪ್ರಕಾರಗಳು ಬೆಳೆದು ಬಂದಿವೆ. ಅದರಲ್ಲೂ ದೃಶ್ಯಕಲೆಯ ಪ್ರಕಾರಗಳು ಅನೇಕ. ನಮ್ಮ ಅನುಭವ ಜಗತ್ತಿನ ನಿರೂಪಣೆಯ ಸಂದರ್ಭದಲ್ಲಿ ನಮ್ಮೊಳಗಿನ ಅಮೂರ್ತ ಜಗತ್ತು ಮತ್ತು ಹೊರಗಿನ ಮೂರ್ತ ಜಗತ್ತು ವೈವಿಧ್ಯಮಯವಾದ ರೂಪಾಕೃತಿಗಳ ಧಾರಣ ಪ್ರಕ್ರಿಯೆಗೊಳಪಟ್ಟು ದೃಶ್ಯರೂಪವಾಗಿ ಪ್ರಕಟ ವಾಗುವುವು. ಮೂರ್ತ ವಾಸ್ತವ ಮತ್ತು ಅಮೂರ್ತ ಕಲ್ಪನೆಗಳು ಕಲಾಕೃತಿಯಾಗಿ ಮೈದಳೆಯುವ ಪ್ರಕ್ರಿಯೆಯು ಆಕಾರ, ಆಯಾಮ, ಬಣ್ಣ, ರೇಖೆ ಮುಂತಾದ ಮೂಲ ಸಾಮಗ್ರಿಯನ್ನವಲಂಬಿಸಿದೆ. ದೃಶ್ಯಕಲಾ ಪ್ರಕಾರದ ಮೂಲ ಪರಿಕರಗಳಾದ ಇವುಗಳಲ್ಲಿ ರೇಖೆಯು ಪ್ರಾಥಮಿಕ ಪರಿಕರವಾಗಿದೆ.

## ರೇಖೆಯ ಗುರುತು–ಪರಿಚಯ ಏನಿದು ರೇಖೆ

ಪ್ರಚಲಿತ ವ್ಯಾಖ್ಯಾನದ ಪ್ರಕಾರ ರೇಖೆಯು ಒಂದು ಚಲಿಸುವ ಬಿಂದು. ಬಿಂದುವು ಒಂದು ಸ್ಥಾನದಿಂದ ಇನ್ನೊಂದೆಡೆ ಚಲಿಸಿದಾಗ

*ರೇಖಾಚಿತ್ರವು ಕಲಾವಿದನ ಭಾವನಾತ್ಮಕ, ವೈಚಾರಿಕ ತುಡಿತದ ತತ್‌ಕ್ಷಣದ ಅಭಿವ್ಯಕ್ತಿ ಯಾಗಿರಲೂ ಸಾಧ್ಯವಿದೆ, ಜೊತೆಗೆ ಅದು ಕಲಾವಿದ ತನಗೆ ತಾನೇ ಮಾಡುವ ಸಂವಾದವಾಗಿರುವುದರೊಂದಿಗೆ ರೇಖೆಗಳೊಂದಿಗೆ ನಡೆಸುವ ಸಂವಾದವೂ, ಅನುಸಂಧಾನವೂ ಮತ್ತು ಮುಖ್ಯವಾಗಿ ಸರಸವೂ ಆಗಿರುತ್ತದೆ.*

ರೇಖೆಯುಂಟಾಗುವುದೆಂಬುದು ಈ ವ್ಯಾಖ್ಯಾನದ ವಿವರಣೆ. ಆದರೆ ಈ ವಿವರಣೆ ಜ್ಯಾಮಿತೀಯ ನೆಲೆಯ ತರ್ಕಬದ್ಧ ವಿವರಣೆಯಾಯ್ತು ಮತ್ತು ಅದು ವಸ್ತುಗಳ ಆಕಾರವನ್ನು, ಅಂಚುಗಳನ್ನು ಮತ್ತು ಚಲನೆಯನ್ನು ಸೂಚಿಸುತ್ತದೆ. ಅದು ರೇಖಾಚಿತ್ರದಲ್ಲಿ ನೆರಳು ಬೆಳಕಿನ ಪ್ರಮಾಣವನ್ನು ಮತ್ತು ಬೆಳಕಿನ ದಿಕ್ಕು ಹಾಗೂ ಮೂಲವನ್ನು ಸೂಚಿಸುವುದು. ನೋಟದ ನಿರ್ದೇಶನ ಮತ್ತು ನಿಯಂತ್ರಣ ಸಾಮರ್ಥ್ಯ ಹೊಂದಿದ ರೇಖೆಯು ಕಲಾಕೃತಿಯ ನಿರ್ಮಿತಿಯಲ್ಲಿ ಹಲಬಗೆಯ ಬಳಕೆಯ ಸಾಧ್ಯತೆಯನ್ನು ಹೊಂದಿದೆ. ರೇಖೆಯ ಕೆಲಸ ವಸ್ತುವಿನ ಅಂಚುಗಳನ್ನು ತೋರಿಸುವುದಾಗಿದೆ.

ವಸ್ತುವೊಂದರ ಆಕಾರದ ಕಲ್ಪನೆಯನ್ನು ಕೊಡುವಲ್ಲಿ ರೇಖೆಯ ಪಾತ್ರ ಮುಖ್ಯವಾದದ್ದು. ವಸ್ತುವಿನ ಆಳ, ಅಗಲ, ಎತ್ತರಗಳೆಂಬ ಹರಹನ್ನು ಸುತ್ತುವರಿದು ನವೀನ ದೃಶ್ಯಸಾಧ್ಯತೆಗೆ ಒಂದು ಬಗೆಯಲ್ಲಿ ಕಾರಣವಾಗುವ ರೇಖೆಯು ಹೇಗೆ ಮೂರ್ತವೊ ಹಾಗೆ ಒಂದು ಅಮೂರ್ತ ಕಲ್ಪನೆಯೂ ಆಗಿದೆ. ವಸ್ತುವೊಂದು ಕಾಲ್ಪನಿಕ ರೇಖೆಗಳಿಂದ ಆವೃತವಾದ ದ್ರವ್ಯರಾಶಿಯೆಂದೇ ಹೇಳಬಹುದು. ರೇಖೆಯ ಆವಿಷ್ಕಾರ ಮತ್ತು ಅಭಿವ್ಯಕ್ತಿ ರೇಖೆಯು ಚಲಿಸುವ ಬಿಂದು ಅಥವಾ ಹಲವು ಬಿಂದುಗಳ ಸಾಲು ಎಂಬಲ್ಲಿ ರೇಖೆಗೆ ತಾರ್ಕಿಕ ಅಸ್ತಿತ್ವವಿದೆ. ಆದರೆ ಇದರ ಭೌತಿಕ ಅಸ್ತಿತ್ವವಿರುವುದು ಎಲ್ಲಿ? ಯಾವ ವಸ್ತುವಿನಲ್ಲಿ? ..ವಾಸ್ತವವೆಂದರೆ ರೇಖೆಯೆಂಬುದು ಸ್ವತಂತ್ರ ಅಸ್ತಿತ್ವವಿಲ್ಲದಿದ್ದರೂ ವಸ್ತುವಿನ ಮೈಯ ಅಂಚಿನ ರೂಪದಲ್ಲಿ ಅಮೂರ್ತವಾಗಿಯೇ ಪ್ರಕಟವಾಗುವ ಒಂದು ವಿಚಿತ್ರ ತತ್ವ. ಯಾವುದೇ ವಸ್ತುವು ತನ್ನ ದ್ರವ್ಯರಾಶಿಯಿಂದಾಗಿ ನೋಟಕ್ಕೆ ದಕ್ಕುವುದೇ ಹೊರತು ಅದರ ಹೊರ ರೇಖೆಗಳ ಕಾರಣದಿಂದಲ್ಲ. ಹೊರರೇಖೆಯು ಒಂದು ಕಾಲ್ಪನಿಕ ಸತ್ಯ. ವಸ್ತುವನ್ನು ಒಂದು ನಿಟ್ಟಿನಿಂದ ನೋಡುವಾಗ ಕಾಣುವ ಅದರ ಅಂಚುಗಳು ರೇಖೆಯಾಗಿ ಅನುಭವಕ್ಕೆ ಬರಬಹುದು. ಇನ್ನು ಕೆಲ ವೇಳೆ ಅತಿ ಕಡಿಮೆ ದ್ರವ್ಯರಾಶಿಯ, ತೆಳುವಾದ ವಸ್ತುವು ರೇಖೆಯಾಗಿಯೇ ಕಾಣಿಸಬಹುದು; ಉದಾಹರಣೆಗೆ ದಾರ, ಕೋಲು, ಕೂದಲು ಮೊದಲಾದುವು. ಹೀಗೆ ವಸ್ತುವಿನ ದ್ರವ್ಯರಾಶಿಯು ಅದರ ಅಸ್ತಿತ್ವಕ್ಕೆ ಮತ್ತು ದೃಶ್ಯಸಾಧ್ಯತೆಗೆ ಕಾರಣವಾದರೂ ಅದರ ಆಕಾರವು ಒಂದು ರೇಖಾತ್ಮಕ ಕಟ್ಟಿಗೆ (Frame) ಒಳಗಾದಂತೆ ಕಾಣಿಸುತ್ತದೆ, ಆ ಮೂಲಕ ಕಾಲ್ಪನಿಕ ರೇಖೆಯ ಮೂರ್ತ ಕಲ್ಪನೆಗೆ ಕಾರಣ ವಾಗುತ್ತದೆ. ಆ ಬಗೆಯಲ್ಲಿ ಅಸ್ತಿತ್ವದಲ್ಲಿರದಿದ್ದ ರೇಖೆಯೆಂಬ ತತ್ವವೊಂದು ತಾರ್ಕಿಕ ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದಂತಾಯ್ತು ಮತ್ತು ವಸ್ತುಮೂಲ ಜಗತ್ತಿನ ದೃಶ್ಯಾತ್ಮಕ ಮರು ನಿರೂಪಣೆಗೆ ಹಾಗೂ ಮನೋಮೂಲ ಜಗತ್ತಿನ ಮೂರ್ತ ಅಭಿವ್ಯಕ್ತಿಗೆ ಆಕಾರವನ್ನು ಕೊಡುವ ಮೂಲಭೂತವಾದ ಪರಿಕರವೂ ಆಯಿತು. ಜ್ಯಾಮಿತಿಯ ಮಿತಿಯಾಚೆ ರೇಖೆಯು ಸಾಮಾನ್ಯವಾಗಿ ಜ್ಯಾಮಿತಿಯ ಒಂದು ಮೂಲಭೂತ ತತ್ವವಾಗಿ ಪರಿಗಣಿಸಲ್ಪಡುವುದಾದರೂ ಜ್ಯಾಮಿತಿಯಾಚೆಗಿನ ಭಿನ್ನ ನೆಲೆಗಳಲ್ಲೂ ಮತ್ತೊಂದೇ ಬಗೆಯ ಪಾತ್ರನಿರ್ವಹಣೆಯಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದೆ. ಜ್ಯಾಮಿತಿಗೆ ಹೊರತಾದ ಈ ಬೇರೊಂದು ನೆಲೆಯ ರೇಖೆಯ ಸ್ವರೂಪ ವಿರಾಟವಾದುದು.

ಸರಳರೇಖೆ, ಲಂಬರೇಖೆ, ಲಘುಕೋನ, ವಿಶಾಲಕೋನ, ವೃತ್ತ, ತ್ರಿಭುಜ, ಚೌಕ, ಆಯತಗಳೆಂಬ ಜ್ಯಾಮಿತಿಯ ಮಿತಿಗಳನ್ನು ಮೀರಿ ಅಮಿತ ರೂಪ, ಸ್ವರೂಪಗಳಲ್ಲಿ ಎಲ್ಲವನ್ನೂ ಆಯತ ಮಾಡಿ ಕೊಂಡು ತೋರುವ ಬಹುಭುಜ, ಬಹುಮುಖ ಸ್ವರೂಪವದು. ತ್ರಿಕೋನಾಯತ ವೃತ್ತ ವ್ಯಾಸ ನ್ಯಾಸಗಳ ಪರಿಧಿಯನ್ನು ದಾಟಿದ ರೇಖೆ ಚಿತ್ರಭಿತ್ತಿಯ ಬಿತ್ತರದಲ್ಲಿ ಚಿತ್ತವೃತ್ತಿಯ ಅಸಂಖ್ಯ ಬಗೆಗಳನ್ನು ಬಗೆಬಗೆಯ ರೂಪ, ಸ್ವರೂಪದ ಗೆರೆಯ ಬಲೆಯಲ್ಲಿ ಹಿಡಿದು ತೋರುವ ಪರಿ ಬೆರಗಾಗಿಸುವಂಥದು. ರೇಖೆಯ ವೇಷಾಂತರ ರೇಖೆಯೆಂಬ ಜ್ಯಾಮಿತೀಯ ಅಂಶವೊಂದನ್ನು ಕಲಾತ್ಮಕ ಅಭಿವ್ಯಕ್ತಿಗೆ ಬಳಸಿದಾಗ ಅದು ಜ್ಯಾಮಿತೀಯ ಮಿತಿಯನ್ನು ಕಳೆದುಕೊಂಡು ಭಾವಾಭಿವ್ಯಕ್ತಿಯ, ನಿರ್ದಿಷ್ಟ ವಿಷಯಾಭಿವ್ಯಕ್ತಿಯ ಮಾಧ್ಯಮವಾಗಿ ಮಾರ್ಪಡುತ್ತದೆ. ರೇಖೆಯು ತನ್ನ ಜ್ಯಾಮಿತೀಯ ಮೂಲ ಸ್ವಭಾವವನ್ನು ಉಳಿಸಿಕೊಳ್ಳುತ್ತಲೇ ಮಾನಸಿಕ ಸಂವೇದನೆಗಳ ಮತ್ತು ದೃಶ್ಯ ಜಗತ್ತಿನ ನಿರೂಪಣೆಯ ಮಾಧ್ಯಮವಾಗಿ ಬೆಳೆಯುವುದು ಅದು ವಹಿಸುವ ಮತ್ತೊಂದೇ ಬಗೆಯ ಪಾತ್ರವಾಗಿದೆ.

ಸಾಮಾನ್ಯ ರೇಖೆಯೊಂದು ರೇಖಾಚಿತ್ರವಾಗಿ ಬೆಳೆಯುವ, ಮಾರ್ಪಡುವ ವಿಶಿಷ್ಟ ಪ್ರಕ್ರಿಯೆಯು ಸಾಮಾನ್ಯ ವಸ್ತು ಅಥವಾ ಪರಿಕರವೊಂದು ಕಲಾವಸ್ತು, ಕಲಾಪರಿಕರವಾಗಿ ಮಾರ್ಪಡುವ ಪ್ರಕ್ರಿಯೆಯೇ ಆಗಿದೆ. ಯಾವುದೇ ವಸ್ತುವಿಗೂ ಸಾಪೇಕ್ಷ ಮತ್ತು ನಿರಪೇಕ್ಷವೆಂಬ ಇಬ್ಬಗೆಯ ವ್ಯಕ್ತಿತ್ವವಿದೆ. ನಿರಪೇಕ್ಷ ನೆಲೆಯಲ್ಲಿ ವಸ್ತುವಿಗೆ ಯಾವುದೇ ಉಪಯೋಗವಿಲ್ಲದಿರಬಹುದು, ಆದರೆ ಸಾಪೇಕ್ಷ ನೆಲೆಯಲ್ಲಿ ಪ್ರತಿಯೊಂದು ವಸ್ತುವಿಗೂ ಒಂದು ಉಪಯೋಗವಿದೆ, ಒಂದು ಪಾತ್ರವಿದೆ. ವಸ್ತುವು ತನ್ನಷ್ಟಕ್ಕೆ ತಾನೇ ಉಪಯುಕ್ತವಲ್ಲದಿರಬಹುದು, ಆದರೆ ಜೀವಜಗತ್ತಿನಲ್ಲಿ ಪ್ರತಿಯೊಂದು ವಸ್ತುವೂ ಹಲಬಗೆಯ ಉಪಯುಕ್ತತೆಯ ಅಪಾರ ಸಾಧ್ಯತೆಯನ್ನು ಹೊಂದಿದೆ. ಈ ಕಾರಣಕ್ಕೇ ಪ್ರತಿಯೊಂದು ವಸ್ತುವಿಗೂ ಒಂದು ವಿಶಿಷ್ಟ ವ್ಯಕ್ತಿತ್ವ ಪ್ರಾಪ್ತವಾಗುವುದು. ವಸ್ತುವಿನ ಈ ವ್ಯಕ್ತಿತ್ವವನ್ನು ನಿರ್ಧರಿಸುವುದು ಅಂತಿಮವಾಗಿ ಮನುಷ್ಯನ ಸ್ವಭಾವಗಳೇ. ವಿಭಿನ್ನ ಸ್ವಭಾವಗಳಗನುಗುಣವಾಗಿ ವಸ್ತುವೊಂದು ವಿಭಿನ್ನ ಪಾತ್ರಗಳನ್ನು ವಹಿಸುತ್ತದೆ. ಆ ಬಗೆಯಲ್ಲಿ ಅದು ಬಹುಬಗೆಯ ರೂಪಾಂತರ ಗಳಿಗೆ ಒಳಗಾಗುವುದು; ಅಪೇಕ್ಷಿತದ ಸಾದೃಶ್ಯವನ್ನು ಸಾಧಿಸುವುದು. ಆಯಾ ವ್ಯಕ್ತಿಯ ಉದ್ದೇಶ, ಅಗತ್ಯಗಳಗನುಸಾರವಾಗಿ ವಸ್ತುವು ಒಂದೊಂದು ಬಗೆಯ ಪರಿಕರವಾಗಿ ಮಾರ್ಪಡುವುದಲ್ಲದೆ ಉದ್ದೇಶಿತ ಗುರಿಸಾಧನೆಗೆ ಪೂರಕವಾಗುವುದು. ವಸ್ತುವೊಂದು ಕಲಾಕೃತಿಯ ಪರಿಕರವಾಗುವುದು ಮತ್ತು ಕಲಾಕೃತಿಯೇ ಆಗುವುದು ಈ ನೆಲೆಯಲ್ಲಿಯೇ. ರೇಖೆಯು ಕಲಾಕೃತಿಯ ಪರಿಕರ ವಾಗುವುದು ಮತ್ತು ರೇಖೆಯೇ ಕಲಾಕೃತಿಯಾಗುವುದೂ ಅದರ ಒಂದು ವಿಶಿಷ್ಟ ಸಾಧ್ಯತೆಯೇ.

ನಿರಪೇಕ್ಷಿತ ನೆಲೆಯಲ್ಲಿ ರೇಖೆ ಕೇವಲ ರೇಖೆ; ಅಪೇಕ್ಷಿತ ನೆಲೆಯಲ್ಲಿ ಅದು ಕಲಾಪರಿಕರ. ಉದ್ದೇಶಿತ ವಿಷಯದ, ವಿಚಾರದ, ಅನುಭವದ ಸಾದೃಶ್ಯವನ್ನು ಸಾಧಿಸುವಲ್ಲಿ ಯಶಸ್ವಿಯಾದಾಗ ರೇಖೆಯೇ ಕಲಾಕೃತಿಯೂ ಆಗಬಹುದು. ರೇಖಾಚಿತ್ರದ ಅವತಾರ ಗೀಚುವುದು (Scribbling) ಮನುಷ್ಯಸಹಜ ಸ್ವಭಾವವೇ ಆಗಿದೆ, ಇದೊಂದು ನಿರುದ್ದಿಷ್ಟ ಪ್ರಕ್ರಿಯೆಯೇ. ಪೆನ್ನು, ಹಾಳೆ ? ಈ ಎರಡು ಪರಿಕರಗಳಿದ್ದರಾಯ್ತು ಎಷ್ಟೊಂದು ಕೈಗಳಿಗೆ ಚಲನೆಯ ಪ್ರೇರಣೆ ತನ್ನಿಂತಾನಾಗಿಯೇ ದೊರೆಯುವುದು. ಮನಸ್ಸಿನಲ್ಲಿ ನಿರ್ದಿಷ್ಟ ವಿಚಾರ, ಭಾವನೆ, ಕಲ್ಪನೆ, ಚಿತ್ರ ಇನ್ನೇನೋ ಇರಲೇಬೇಕೆಂದೇನಿಲ್ಲ, ಖಾಲಿ ಮನಸ್ಸಿನ ಕಾರನಾಮೆಯೆಂಬಂತೆ ಗೀಚುವಿಕೆ ಮೊದಲಾಗುವುದು. ಪೆನ್ನೋ, ಪೆನ್ಸಿಲನ್ನೋ ಹಿಡಿದ ಕೈ ಹರಿದಾಡತೊಡಗಿದಂತೆ ಹಾಳೆಯ ಮೇಲೆ ಚಿತ್ರ ವಿಚಿತ್ರವಾದ

ಆಕಾರಗಳನ್ನು ಬಿಂಬಿಸುತ್ತ ಮೂಡುವ, ಹರಿವ ಗೆರೆಗಳು ಆ ಹಾಳೆಯ ನೆಲದ ಹರವಿನ ಮೇಲೆ ಹರಿವ ತೊರೆ, ಹೊಳೆಗಳ ಹಾಗೇ ಅಂಕು-ಡೊಂಕು, ಬಾಗು- ಬಳುಕು, ಬಿರುಸು-ತುರುಸು, ಮಿದು-ಹದ ಮೊದಲಾದ ಎಲ್ಲವುಗಳನ್ನು ಕಾಣಿಸುತ್ತ, ಮನದ ಅಂತರಾಳಕ್ಕೆ ಅವ್ಯಕ್ತ ಆನಂದದ ಸೊದೆಯನ್ನು ಣಿಸುವುವು. ಬೇರೆ ಕಣ್ಣಿಗೆ ಇದು ಬರೀ ಅರ್ಥವಿಲ್ಲದ ಗೀಚುವಿಕೆಯಾಗಿ ಕಾಣಬಹುದಾದರೂ ಬರೆವ ಕಣ್ಣಿಗೆ ಎಂಥದೋ ಒಂದು ಬಗೆಯ ವಿಚಿತ್ರ ಸುಖದ, ರಸಾನುಭವದ ಆಕರವಾಗಿಯೇ ಕಾಣುವುದು.

ಗೀಚುವಿಕೆ ಕೇವಲ ಕಲಾವಿದ ಮಾತ್ರನ ಸ್ವಭಾವವಲ್ಲ, ಇದು ಎಲ್ಲ ಜನಸಾಮಾನ್ಯರಲ್ಲೂ ಹುದುಗಿರುವ ಒಂದು ಮೂಲ ಸ್ವಭಾವ. ಈ ದೃಷ್ಟಿ ಯಿಂದ ಪ್ರತಿಯೊಬ್ಬನೂ ರೇಖಾಚಿತ್ರ ಕಲಾವಿದನೇ ಆಗಿದ್ದಾನೆ. ಕಲಾವಿದನೆಂದೇ ಅಧಿಕೃತವಾಗಿ ಗುರುತಿಸಿಕೊಂಡ ವ್ಯಕ್ತಿಗೆ ಕಲೆಯ ಮಾಟಕ್ಕೆಂದೇ ಅಣಿಯಾದ ಮನೆ ಮೊದಲಾದ ಕಟ್ಟಡದ ಗೋಡೆಗಳೂ, ತಾಳೆಗರಿಗಳೂ, ಕಾಗದ ಮುಂತಾದ ಸುಸಂಸ್ಕೃತವೆಂದು ಭಾವಿಸಬಹುದಾದ ಪರಿಕರಗಳು ಚಿತ್ರಭಿತ್ತಿಗಳಾದರೆ, ತಾನೊಬ್ಬ ಕಲಾವಿದನೆಂದು ತನಗೂ ಗೊತ್ತಿರದ ಗುಪ್ತ ಕಲಾವಿದನ ಸುಪ್ತ ಭಾವನೆಗಳಿಗೆ ಬಂಡೆಗಳ ಸೆರಗು, ಮರ-ಗಿಡ, ಹಾಳುಕಟ್ಟಡ, ಸಾರ್ವಜನಿಕ ಶೌಚಾಲಯ ಮೊದಲಾದವುಗಳು ಮೈಯೊದಗಿಸುತ್ತವೆ. ಒಂದು ನೆಲೆಯಲ್ಲಿ ಹೇಳುವುದಾದರೆ ರೇಖೆಯು ಚಿತ್ರ ಮತ್ತು ಶಿಲ್ಪಕಲೆಗಳ ಆಧಾರ ಭೂತವಾದ ಅಂಗ; ಅದು ಈ ಕಲೆಗಳ ಅಸ್ಥಿಯೇ ಆಗಿದೆ. ರೇಖಾಚಿತ್ರದ ಅಸ್ಥಿಪಂಜರದ ಹೊರತು ಚಿತ್ರ ಮತ್ತು ಶಿಲ್ಪಗಳು ಮೈದಳೆಯುವುದಕ್ಕೆ ಸಾಧ್ಯವಿಲ್ಲ. ಚಿತ್ರ, ಶಿಲ್ಪವೊಂದರ ದೃಶ್ಯಲೋಕದ ಸಮಗ್ರವನ್ನು ಅವುಗಳ ವೈವಿಧ್ಯತೆಯಲ್ಲಿ ಕಟ್ಟಿಕೊಡುವ ಕೆಲಸ ಮೊದಲಾಗುವುದೇ ರೇಖಾಚಿತ್ರ ರಚನೆಯ ಮೂಲಕ. ಕಲಾಕೃತಿಯ ಸಾಂಪ್ರದಾಯಿಕ ರಚನಾಪ್ರಕ್ರಿಯೆ (Usual Process) ಯಲ್ಲಿನ ಮೊತ್ತಮೊದಲ ಹಂತವೇ ರೇಖಾಚಿತ್ರದ ಹಂತ; ಇದು ಕ್ರಮಬದ್ಧವಾಗಿ ಮುಂದೆ ಮೈದಳೆಯಲಿರುವ ಪರಿಪೂರ್ಣ ಕಲಾಕೃತಿಯ ಮೂಲ ಭೂಮಿಕೆ. ಹಾಗೆಂದೇ ಕೃತಿಯ ರಾಚನಿಕ ಪ್ರಕ್ರಿಯೆಯಲ್ಲಿ ರೇಖಾಚಿತ್ರಕ್ಕೆ ಮಹತ್ವದ ಸ್ಥಾನವಿದೆ; ಜೊತೆಗೆ ಕಲಾಕೃತಿಯ ರಾಚನಿಕ ಸೌಂದರ್ಯದ ಮೌಲ್ಯ ಮಾಪನ ಮಾಡುವಲ್ಲಿ ರೇಖೆ ಮತ್ತು ರೇಖಾಚಿತ್ರದ ಪರಿಗಣನೆ ಹಲವು ಸಂದರ್ಭಗಳಲ್ಲಿ ಅತ್ಯವಶ್ಯಕ. ಈ ಕಾರಣದಿಂದಲೇ ದೃಶ್ಯಕಲೆಯ ರಾಚನಿಕ ವಿಮರ್ಶೆಯಲ್ಲಿ ರೇಖೆ ಮತ್ತು ರೇಖಾಚಿತ್ರಗಳು ಕೂಡ ಪರಿಗಣಿಸಲ್ಪಡುವ ಪ್ರಮುಖ ಅಂಶಗಳಾಗಿವೆ. ರೇಖಾಚಿತ್ರದ ಸೊಗಸು ಮತ್ತು ಮೌಲ್ಯ ಸಾಮಾನ್ಯವಾಗಿ ಯಾವುದೇ ಬಗೆಯ ಕಲೆಯ ಗುರಿಯು ಸೌಂದರ್ಯಾನುಭವವೇ. ಹಾಗೆಂದು ಸೌಂದರ್ಯಾನುಭವವೇ ಅಂತಿಮ ಗುರಿಯಲ್ಲ. ಸಾಪೇಕ್ಷ ನೆಲೆಯಲ್ಲಿ ಕಲೆಗೆ ಕೇವಲ

***ಗೀಚುವಿಕೆ ಕೇವಲ ಕಲಾವಿದ ಮಾತ್ರನ ಸ್ವಭಾವವಲ್ಲ, ಇದು ಎಲ್ಲ ಜನ ಸಾಮಾನ್ಯರಲ್ಲೂ ಹುದುಗಿರುವ ಒಂದು ಮೂಲ ಸ್ವಭಾವ. ಈ ದೃಷ್ಟಿಯಿಂದ ಪ್ರತಿಯೊಬ್ಬನೂ ರೇಖಾಚಿತ್ರ ಕಲಾವಿದನೇ ಆಗಿದ್ದಾನೆ. ಕಲಾವಿದನೆಂದೇ ಅಧಿಕೃತವಾಗಿ ಗುರುತಿಸಿಕೊಂಡ ವ್ಯಕ್ತಿಗೆ ಕಲೆಯ ಮಾಟಕ್ಕೆಂದೇ ಅಣಿಯಾದ ಮನೆ ಮೊದಲಾದ ಕಟ್ಟಡದ ಗೋಡೆಗಳೂ, ತಾಳೆಗರಿಗಳೂ, ಕಾಗದ ಮುಂತಾದ ಸುಸಂಸ್ಕೃತವೆಂದು ಭಾವಿಸಬಹುದಾದ ಪರಿಕರಗಳು ಚಿತ್ರಭಿತ್ತಿಗಳಾದರೆ, ತಾನೊಬ್ಬ ಕಲಾವಿದನೆಂದು ತನಗೂ ಗೊತ್ತಿರದ ಗುಪ್ತ ಕಲಾವಿದನ ಸುಪ್ತ ಭಾವನೆಗಳಿಗೆ ಬಂಡೆಗಳ ಸೆರಗು, ಮರ-ಗಿಡ, ಹಾಳುಕಟ್ಟಡ, ಸಾರ್ವಜನಿಕ ಶೌಚಾಲಯ ಮೊದಲಾದವುಗಳು ಮೈಯೊದಗಿಸುತ್ತವೆ.***

ಸೌಂದರ್ಯಾನುಭವ-ರಸಾನುಭವ ಮಾತ್ರವೇ ಅಂತಿಮ ಗುರಿಯಾಗಿರದೆ ಇನ್ನಿತರ ಬೇರೆ ಗುರಿಗಳು ಪ್ರಮುಖವಾಗಿವೆ. ಮನುಷ್ಯನಿಗೆ, ಬದುಕಿಗೆ, ಸಮಾಜಕ್ಕೆ ಸಂಸ್ಕಾರವನ್ನು ನೀಡುವ ಮೂಲಕ ವ್ಯಕ್ತಿಯನ್ನು, ಬದುಕನ್ನು, ಸಮಾಜವನ್ನು ಉದ್ಧರಿಸುವ, ಎತ್ತರಿಸುವ, ಮಾನವೀಯ ಗೊಳಿಸುವ ಮಹತ್ತರ ಉದ್ದೇಶ ಮತ್ತು ಹೊಣೆಗಾರಿಕೆ ಕಲೆಯದಾಗಿದೆ. ಹಾಗೆಂದೇ ಎಲ್ಲ ಸಂದರ್ಭ ಗಳಲ್ಲೂ ಕೇವಲ ಸೌಂದರ್ಯ ಸ್ವರೂಪಿಯಾಗಿಯೇ ಇರದು. ಕಾಲದ ಅಗತ್ಯಗಳು ಮತ್ತು ಬದುಕಿನ ಸಂದರ್ಭಗಳು ಕಲೆಯ ಸ್ವರೂಪ ಮತ್ತು ಉದ್ದೇಶಗಳನ್ನು ನಿರ್ಧರಿಸುವುವು. ಆದ್ದರಿಂದಲೇ ಸೌಂದರ್ಯಕ್ಕೆ ವಿರುದ್ಧವಾದ ವಿಕೃತಿಯೂ, ಅಸಂಗತತೆಯೂ, ಅಣಕವೂ ಮುಂತಾದ ಪ್ರಕಾರಗಳು ಕಲೆಯ ಭಿನ್ನ ಸ್ವರೂಪಗಳೇ ಆಗಿವೆ. ಕೇವಲ ಸೌಂದರ್ಯಾಸ್ವಾದನೆಯೋ, ರಸಾನುಭವವೋ ಕಲೆಯ ಏಕಮಾತ್ರ ಉದ್ದೇಶವಾಗಿರದೆ, ಆತ್ಮಾವಲೋಕನಕ್ಕೆ ಹಚ್ಚುವ, ವ್ಯಕ್ತಿಸ್ವಭಾವಗಳನ್ನು, ಬದುಕನ್ನು ವಿಶ್ಲೇಷಿಸುವ, ಸಮಾಜವನ್ನು, ವಿಭಿನ್ನ ಕ್ಷೇತ್ರಗಳನ್ನು ವಿಮರ್ಶಿಸುವ, ಟೀಕಿಸುವ, ತಿದ್ದುವ ವಿಭಿನ್ನ ಕಾರ್ಯಗಳೂ ಕಲೆಯ ವಿಭಿನ್ನ ಉದ್ದೇಶಗಳೇ ಆಗಿವೆ. ಆದರೆ ನಿರಪೇಕ್ಷ ನೆಲೆಯಲ್ಲಿ ಕಲೆಯ ಅಂತಿಮ ಗುರಿ ಸೌಂದರ್ಯಾನುಭವ-ರಸಾನುಭವವೇ ಆಗಿದೆ. ಮನಸ್ಸಿಗೆ ಮುದ, ಆನಂದ ಬೇಕೆನಿಸಿದಾಗ ಮನುಷ್ಯ ಮೊರೆ ಹೋಗುವ ಮೂಲವೇ ಸೌಂದರ್ಯದ ನೆಲೆ, ಕಲೆ. ಅದು ಹಾಡಾಗಿರಬಹುದು, ಸಾಹಿತ್ಯರಹಿತ ಪರಿಶುದ್ಧ ಸಂಗಿತವಾಗಿರ ಬಹುದು, ಕುಣಿತವಾಗಿರಬಹುದು, ಚಿತ್ರ ವಿಚಿತ್ರವಾದ, ಅರ್ಥಸಹಿತ-ರಹಿತ ರೂಪಾಕಾರಗಳ ರಚನೆಯಾಗಿರಬಹುದು. ಇಲ್ಲಿ ಕಲೆ ಎಲ್ಲ ಬಗೆಯ ಸಾಮಾಜಿಕ ಬಾಧ್ಯತೆಗಳಿಂದ ಮುಕ್ತವಾದ, ಕೇವಲ ಆನಂದರೂಪಿ, ಸೌಂದರ್ಯಸ್ವರೂಪಿ ಮಾತ್ರ. ಹೀಗಾಗಿ ಯಾವುದೇ ಬಗೆಯ ಕಲೆಯ ಪ್ರಾಥಮಿಕ ಮೌಲ್ಯ ಅದರ ಸೌಂದರ್ಯವೇ ಆಗಿದೆ. ಈ ನೆಲೆಯಲ್ಲೇ ರೇಖಾಚಿತ್ರವೊಂದರ ಮೌಲ್ಯವೂ ಪ್ರಾಥಮಿಕವಾಗಿ ಅದರ ಸೊಗಸು, ಸೌಂದರ್ಯಗಳೇ ಆಗಿವೆ; ನಂತರದಲ್ಲಿ ಅದು ಚಿತ್ತರಿಸುವ ಸಂವೇದನೆಗಳನ್ನು ಆಧರಿಸಿ ಅದರ ಮೌಲ್ಯವು ನಿರ್ಧರಿತವಾಗುವುದು. ಅಂದರೆ, ಕಲಾಕೃತಿಯಾಗಿ ರೇಖಾಚಿತ್ರವೊಂದರ ಸೌಂದರ್ಯಕ್ಕೆ ಪೂರಕವಾಗುವ ರಾಚನಿಕ ಅಂಶಗಳು, ರಾಚನಿಕ ಪ್ರಕ್ರಿಯೆ ಮತ್ತು ಸ್ವರೂಪ ಹಾಗೂ ಅದು ಹೇಳುವ ವಿಷಯ, ವಸ್ತುವಿನ ಮಹತ್ವ ಮತ್ತು ಪ್ರಸ್ತುತತೆ ಏನೆಂಬ ಅಂಶಗಳು ಅದರ ಮೌಲ್ಯವನ್ನು ನಿರ್ಣಯಿಸುವ ಅಂಶಗಳಾಗಿವೆ. ಪರಿಪೂರ್ಣ ಕಲಾಕೃತಿಯೊಂದರ ಚೆಲುವು ಒಲವುಗಳ ಮೌಲ್ಯವನ್ನು ನಿರ್ಣಯಿಸುವ ಅಂಶಗಳೇ ಪರಿಮಿತ ನೆಲೆಯಲ್ಲಿ ಕಲಾಕೃತಿಯ ಒಳಹಂದರವಾದ ರೇಖಾಚಿತ್ರದ ಚೆಲುವು ಒಲವುಗಳನ್ನೂ ನಿರ್ಣಯಿಸುವ ಅಂಶಗಳಾಗಿವೆ. ರೇಖಾಚಿತ್ರದ ಸೊಗಸನ್ನು ಸವಿದು ಅದರ ಮೌಲ್ಯವನ್ನು ಮನಗಾಣಬೇಕಾದರೆ ರೇಖಾಚಿತ್ರ ವೈವಿಧ್ಯತೆಯನ್ನು ಅವಲೋಕಿಸ ಬೇಕು; ಏಕೆಂದರೆ ಈ ಮಾಧ್ಯಮದಲ್ಲಿ ವಿಭಿನ್ನ ಉದ್ದೇಶಕ್ಕನುಗುಣವಾಗಿ ವಿಭಿನ್ನ ಪ್ರಕಾರಗಳು ಕವಲೊಡೆದಿರುವಾಗ ಅವನ್ನು ವಿಭಿನ್ನವಾಗಿಯೇ ಸ್ವೀಕರಿಸಬೇಕಾದ ಮತ್ತು ವಿಭಿನ್ನ ಪ್ರಕಾರಕ್ಕೆ ಸೇರಿದ ರೇಖಾಚಿತ್ರಗಳ ಸೌಂದರ್ಯಕ್ಕೆ ಕಾರಣವಾಗುವ ಭಿನ್ನ ಅಂಶಗಳನ್ನು ಗಮನಿಸಬೇಕಾದ ಅಗತ್ಯವಿದೆ. ವಿಭಿನ್ನ ಐತಿಹಾಸಿಕ ಘಟ್ಟಗಳಲ್ಲಿ ಬೆಳೆದುಬಂದ ವಿಭಿನ್ನ ಕಲಾಶೈಲಿಗಳ ಸ್ವರೂಪ ನಿರ್ಣಯದಲ್ಲಿ ಚಿತ್ರದ ಅಸ್ಥಿಪಂಜರವೇ ಆದ ರೇಖಾಚಿತ್ರದ ಶೈಲಿ, ಸ್ವರೂಪದ ಪಾತ್ರ ಪ್ರಮುಖವಾಗಿದೆ. ಪ್ರತಿಯೊಂದು ವರ್ಣಚಿತ್ರವೂ ಬಣ್ಣ ಹೊದಿಸಿದ ರೇಖಾಚಿತ್ರವೇ ಆಗಿರುವುದರಿಂದ ಚಿತ್ರವೊಂದರ ಶೈಲಿಯ ಸಮಗ್ರ ಆಯಾಮದ ಬೆಳವಣಿಗೆಯಲ್ಲಿ ಎಲ್ಲ ಬಗೆಯ ರಾಚನಿಕ ವಿಶಿಷ್ಟತೆಯನ್ನು

ರೂಪಿಸುವ, ಖಚಿತಗೊಳಿಸುವ, ನಿರ್ದೇಶಿಸುವ ನಿರ್ಣಾಯಕ ತತ್ವ ರೇಖಾಚಿತ್ರವಾಗಿದೆ. ಕಲೆಯ ಯಾವುದೇ ಶೈಲಿಯೊಂದು ರೂಪಿತವಾಗಿ ವಿಕಾಸವನ್ನು ಹೊಂದುವುದು ಆಯಾ ನಿರ್ದಿಷ್ಟ ರೇಖಾಚಿತ್ರ ಶೈಲಿಯನ್ನವಲಂಬಿಸಿಯೇ. ಸಾಂಪ್ರದಾಯಿಕ ಕಲಾಶೈಲಿಯ ಒಳಹಂದರವು ಸಾಂಪ್ರದಾಯಿಕ ರೇಖಾಚಿತ್ರ ಶೈಲಿಯೇ ಆಗಿರುವ ಹಾಗೆ ಆಧುನಿಕ ಕಲಾಶೈಲಿಯ ರಾಚನಿಕ ಮೂಲಾಧಾರವು ಆಧುನಿಕ ರೇಖಾಚಿತ್ರ ಶೈಲಿಯೇ ಆಗಿರುವುದು. ಶೈಲಿ ಮತ್ತು ಪ್ರಕಾರಗಳನ್ನು ರೂಪಿಸಿ ಬೆಳೆಸುವಲ್ಲಿ ಕಾರಣವಾಗುವ ಅಂಶಗಳು ಆಯಾ ಕಾಲದ ಸೌಂದರ್ಯ ಸಿದ್ಧಾಂತಗಳು, ನಿಯಮಗಳು, ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಏಳುಬೀಳುಗಳು, ವಿಜ್ಞಾನ ಮತ್ತು ತಂತ್ರಜ್ಞಾನಗಳ ಕೊಡುಗೆಗಳು ಪ್ರಮುಖವಾದುವಾದರೂ ಕಲಾವಿದನ ಮನೋಭಾವ, ಉದ್ದೇಶ ಮತ್ತು ಆಯಾ ಕಾಲದ ಅವಶ್ಯಕತೆಗಳು ಶೈಲಿಯ ಬಹುತ್ವಕ್ಕೆ, ವಿಭಿನ್ನತೆ ಮತ್ತು ವಿಶಿಷ್ಟತೆಗಳಿಗೆ ಕಾರಣವಾಗುವವು. ಆದ್ದರಿಂದಲೇ ಕಲಾವಿದನಿಂದ ಕಲಾವಿದನಿಗೆ ವ್ಯಕ್ತಿತ್ವ ಮತ್ತು ಮನೋಭಾವದಲ್ಲಿ ಭಿನ್ನತೆ ಕಾಣುವ ಹಾಗೆ ಆಯಾ ಕಲಾವಿದನ ಶೈಲಿಯೂ ಅವನಿಗೇ ವಿಶಿಷ್ಟವಾದ ಅನನ್ಯತೆಯಿಂದ ಕೂಡಿ ಪರಸ್ಪರ ಭಿನ್ನಶೈಲಿಗಳ ಉಗಮವಾಗುವುದು. ಹಾಗೆಂದೇ ಎಷ್ಟು ಜನ ಕಲಾವಿದರೋ ಅಷ್ಟು ಶೈಲಿಗಳು; ಅಷ್ಟು ಶೈಲಿಯ ರೇಖಾಚಿತ್ರಗಳು!

> ***ಒಬ್ಬನ ರೇಖಾಚಿತ್ರದ ವಸ್ತುವು ನೈಜತೆಯನ್ನು, ವಾಸ್ತವತೆಯನ್ನು, ಪರಿಸರವನ್ನು, ಆಗು- ಹೋಗುಗಳನ್ನು ಆಧರಿಸಿದರೆ ಇನ್ನೊಬ್ಬನದು ಕಾಲ್ಪನಿಕ, ಅತಿವಾಸ್ತವ, ಅವಾಸ್ತವ, ಭ್ರಮಾತ್ಮಕ ಸ್ವರೂಪದ್ದಾಗಿರಬಹುದು. ಇಲ್ಲೆಲ್ಲ ರೂಪ, ರೂಪಕ, ಸಂಕೇತ, ಪ್ರತಿಮೆಗಳ ಕಲಾತ್ಮಕ ಆಟ ಮೇಲಾಟಗಳೂ ತೊಡಗಿರಬಹುದು ಇಲ್ಲವೆ ಇವೆಲ್ಲದರಿಂದ ಹೊರತಾದ ನೇರ, ಸರಳ, ಮುಗ್ಧ ಅಭಿವ್ಯಕ್ತಿಯೂ ಮೆರೆದಿರಬಹುದು.***

ರೇಖಾಚಿತ್ರದ ಸೊಗಸಿಗೆ ಆಯಾ ಕಲಾವಿದನ ವಿಶಿಷ್ಟ ಶೈಲಿಯೇ ಪ್ರಧಾನ ಕಾರಣ. ಒಬ್ಬೊಬ್ಬ ಕಲಾವಿದನೂ ಬರೆವ ಗೆರೆಗಳ ಸ್ವರೂಪ, ಸ್ವಭಾವ, ಆಳ, ಅಗಲ, ಬಾಗು, ಬಳುಕು, ತೂಕ, ತೊನೆದಾಟ ಆಯಾ ಕಲಾವಿದನ ವೈಶಿಷ್ಟ್ಯಪೂರ್ಣ ಅಭಿವ್ಯಕ್ತಿಯನ್ನು ಹಿಡಿದಿಡುತ್ತಲೇ ಅನನ್ಯ ಅನುಭವಕ್ಕೆ ಕಾರಣವಾಗುವುವು. ಒಬ್ಬನ ರೇಖಾಚಿತ್ರ ಅಲಂಕಾರಿಕ ವಿನ್ಯಾಸ, ವಿವರಗಳಿಂದ ಸಮೃದ್ಧವಾಗಿ ಲಾಲಿತ್ಯಪೂರ್ಣವಾಗಿದ್ದರೆ ಇನ್ನೊಬ್ಬನದು ರೇಖಾಲಾಲಿತ್ಯವಿದ್ದೂ ಅಲಂಕಾರಿಕ ವಿನ್ಯಾಸ, ವಿವರಗಳು ಅನವಶ್ಯಕವೆಂಬಂತೆ ಮುಕ್ತ, ಸರಳ ಶೈಲಿಯದಾಗಿರಬಹುದು. ಮತ್ತೊಬ್ಬನದು ಲಾಲಿತ್ಯಕ್ಕೆ ವಿರುದ್ಧವಾದ ಒರಟು ಗೆರೆಗಳ, ಬಿರುಸು ಓಟದ ಕಸುವು ತುಂಬಿದ ರೂಪಾಕಾರಗಳಿಂದ ವಿಜೃಂಭಿಸಬಹುದು; ಮಗುದೊಬ್ಬನದು ಮಂದಗತಿಯ, ಮಾರ್ದವತೆ ತುಂಬಿದ, ಮಾಧುರ್ಯ ಪೂರ್ಣ ರಚನೆಯಾಗಿರಬಹುದು. ಒಬ್ಬನದು ಅಳೆದು, ತೂಗಿಹಾಕಿದ ಪ್ರಮಾಣಬದ್ಧ ಗೆರೆಗಳ ನೈಜ ಶೈಲಿಯಾದರೆ ಇನ್ನೊಬ್ಬನದು ನೈಜತೆಯನ್ನು ಮೀರುವ ಉತ್ಪ್ರೇಕ್ಷಿತ ಪ್ರಮಾಣದ ಉತ್ಪ್ರೇಕ್ಷಿತ ರೂಪಾಕಾರಗಳನ್ನು ಹೊಂದಿರಬಹುದು. ಒಬ್ಬನ ರೇಖಾಚಿತ್ರದ ವಸ್ತುವು ನೈಜತೆಯನ್ನು, ವಾಸ್ತವತೆಯನ್ನು, ಪರಿಸರವನ್ನು, ಆಗು- ಹೋಗುಗಳನ್ನು ಆಧರಿಸಿದರೆ ಇನ್ನೊಬ್ಬನದು ಕಾಲ್ಪನಿಕ, ಅತಿವಾಸ್ತವ, ಅವಾಸ್ತವ, ಭ್ರಮಾತ್ಮಕ ಸ್ವರೂಪದ್ದಾಗಿರಬಹುದು. ಇಲ್ಲೆಲ್ಲ ರೂಪ, ರೂಪಕ, ಸಂಕೇತ, ಪ್ರತಿಮೆಗಳ ಕಲಾತ್ಮಕ ಆಟ ಮೇಲಾಟಗಳೂ ತೊಡಗಿರಬಹುದು ಇಲ್ಲವೆ ಇವೆಲ್ಲದರಿಂದ ಹೊರತಾದ ನೇರ, ಸರಳ, ಮುಗ್ಧ ಅಭಿವ್ಯಕ್ತಿಯೂ ಮೆರೆದಿರಬಹುದು. ರೇಖಾಚಿತ್ರದ ಸೊಗಸಿಗೆ, ಮೌಲ್ಯವನ್ನು

ಹೆಚ್ಚಿಸುವುದಕ್ಕೆ ಕಾರಣವಾಗುವ ಒಂದೆರಡು ರಾಚನಿಕ ಅಂಶಗಳನ್ನು ಪ್ರಮುಖವಾಗಿ ಗಮನಿಸಲೇಬೇಕು. ಅವು ಅದರ ಮೈ ಮತ್ತು ಮೈವಳಿಕೆಗೆ ಸಂಬಂಧಿಸಿದ ಅಂಶಗಳು. ಬಣ್ಣದ ಚಿತ್ರದಲ್ಲಿ ಬೇರೆ ಬೇರೆ ರೂಪಾಕೃತಿಗಳ ಉದ್ದ, ಅಗಲ, ಆಳದ ಮುಮ್ಮೈ (3ಆ) ಕಲ್ಪನೆಯನ್ನು ಕೊಡುವಲ್ಲಿ, ನೆರಳು ಬೆಳಕಿನ ಅಭಿವ್ಯಕ್ತಿಯಿಂದ ವಸ್ತುವಿನ ಘನತ್ವವನ್ನು ಸೂಚಿಸುವಲ್ಲಿ ಬಣ್ಣವೂ ಪ್ರಮುಖ ಅಂಶವಾಗಿದೆ. ಬಣ್ಣದ ಚಿತ್ರ ಕೂಡ ರೇಖಾಚಿತ್ರದಂತೆಯೇ ಇಮ್ಮೈ (2ಆ) ಚಿತ್ರವೇ ಆದರೂ ಚಿತ್ರದೊಳಗಿನ ಹಿನ್ನೆಲೆ, ಮುನ್ನೆಲೆ, ಆಳ, ಹರವುಗಳಿಂದ ಕೂಡಿದ ಮುಮ್ಮೈ ಪರಿಸರದ ಕಲ್ಪನೆಯನ್ನು ಕೊಡುವಲ್ಲಿ, ನಿರ್ಮಿಸುವಲ್ಲಿ ಬಣ್ಣದ ಪಾತ್ರ ವಿಶಿಷ್ಟವಾಗಿದೆ. ಆದರೆ ರೇಖಾಚಿತ್ರವು ಸಾಮಾನ್ಯವಾಗಿ ಬಣ್ಣರಹಿತ ಚಿತ್ರವಾಗಿರುವುದರಿಂದ, ರೇಖೆಗಳೇ ಇದರ ಸರ್ವಸ್ವವೂ ಆಗಿರುವುದರಿಂದ ನೋಟದ ಸಮಸ್ತ ಸಾಮಗ್ರಿಯ ವಿವರಗಳನ್ನು ಕೇವಲ ರೇಖೆಗಳ ಬಹುಬಗೆಯ ಬಳಕೆಯಿಂದಲೇ ತೋರಿಸುವುದು ಅನಿವಾರ್ಯ. ಹಾಳೆಯ ಚಪ್ಪಟೆ ಮೈಯ ಮೇಲಿನ ಉದ್ದ ಅಗಲದ ಇಮ್ಮೈಯ ಚಪ್ಪಟೆ ಚಿತ್ರದ ಸೊಗಸೇ ಸೊಗಸು. ಬೇಕೆಂದಾದರೆ ರೇಖಾಕಣ್ನೆಲೆ (ಲೀನಿಯರ್ ಪರ್ಸ್ಪೆಕ್ಟಿವ್) ಮತ್ತು ತೆಳುಗೆರೆ, ದಪ್ಪಗೆರೆ, ಉದ್ದಗೆರೆ, ಅಡ್ಡಗೆರೆ, ಓರೆಗೆರೆ, ಸಿಕ್ಕುಗೆರೆ ಇಲ್ಲವೆ ಚುಕ್ಕೆಗಳನ್ನು ಬಳಸಿ ಆಕೃತಿಗಳಿಗೆ ಮುಮ್ಮೈ ಸ್ವರೂಪವನ್ನು ಮತ್ತು ಮೈವಳಿಕೆಯನ್ನು ರೂಪಿಸಬಹುದಾದ ಅವಕಾಶ ಕಲಾವಿದನಿಗಿದ್ದೇ ಇದೆ. ಆದರೆ ಚಪ್ಪಟೆ ಹಾಳೆಯ ಬಿಳಿ ಮೈ ಮತ್ತು ಚಪ್ಪಟೆ ಚಿತ್ರದ ಕಪ್ಪು ಗೆರೆಗಳು ಒಂದಕ್ಕೊಂದು ಸಂವಾದಿಯಾಗಿ ಸರಸ ನಡೆಸುವ ಪರಿ ಅನನ್ಯ. ರೇಖಾಚಿತ್ರವು ಕಲಾವಿದನ ಭಾವನಾತ್ಮಕ, ವೈಚಾರಿಕ ತುಡಿತದ ತತ್‌ಕ್ಷಣದ ಅಭಿವ್ಯಕ್ತಿಯಾಗಿರಲೂ ಸಾಧ್ಯವಿದೆ, ಜೊತೆಗೆ ಅದು ಕಲಾವಿದ ತನಗೆ ತಾನೇ ಮಾಡುವ ಸಂವಾದವಾಗಿರುವುದರೊಂದಿಗೆ ರೇಖೆಗಳೊಂದಿಗೆ ನಡೆಸುವ ಸಂವಾದವೂ, ಅನುಸಂಧಾನವೂ ಮತ್ತು ಮುಖ್ಯವಾಗಿ ಸರಸವೂ ಆಗಿರುತ್ತದೆ.

❑

# ಆಧುನಿಕ ಕಲಾ ಸಂದರ್ಭದಲ್ಲಿ ರೇಖಾ ಚಿತ್ರಗಳ ಪ್ರಯೋಗಗಳು

♦ ಕಿರಣ್‌ಕುಮಾರ್ ಮಾಡಾಳು

## ಪ್ರಸ್ತಾವನೆ

ಕಲಾ ಪ್ರಕಾರಗಳು ಹಲವು, ಆದರೆ ವ್ಯಕ್ತಪಡಿಸುವ ಸೃಜನಶೀಲತೆ ಒಂದೇ ಆಗಿರುತ್ತದೆ. ಅನ್ವೇಷಣೆಯಾದಂತೆಲ್ಲಾ ಪರಿಕರಗಳು ವಿಧ ವಿಧವಾಗಿ ರೂಪಗೊಳ್ಳುತ್ತಾ ಆಧುನಿಕ ಮನಸ್ಸಿಗೆ ವಿಸ್ತಾರವಾದ ವೇದಿಕೆ ಲಭ್ಯವಾಗಿದೆ. ಮೊಟ್ಟ ಮೊದಲಿಗೆ 'ಆಧುನಿಕ' ಎನ್ನುವ ಶಬ್ದದ ಅರ್ಥ 'ವಾಸ್ತವ' (Realtys) ಹಾಗೂ 'ಕಲ್ಪನೆ' (Imagination)ಗಳ ನಡುವೆ ಸಂದರ್ಭಾನುಸಾರವಾಗಿ ಪ್ರಕಟಗೊಳ್ಳುತ್ತವೆ. ಕಾಲಘಟ್ಟ ಪುರಾತನವೇ ಆಗಿರಲಿ ಅಥವಾ ಆಧುನಿಕವೇ ಆಗಿರಲಿ, ಕಲಾವಿದನ ಅಂತಸ್ಫುರಣ ಅವಿಚ್ಛಿನ್ನವಾಗಿ ಪ್ರವಹಿಸುತ್ತಿರುತ್ತದೆ. ಆದಿ ಮಾನವನ ಗುಹಾಂತರ ಚಿತ್ರಗಳೇ ಆಗಲಿ, ನವ ಮಾನವನ ಕಲಾಕೃತಿಗಳೇ ಆಗಲಿ ಸೃಜನ ಶೀಲತೆ ಒಂದೇ ಆಗಿರುತ್ತದೆ.



ಗಣಕ ತಂತ್ರಜ್ಞಾನದಿಂದ ಚಿತ್ರಿಸಿದ ಕಲಾಕೃತಿ

## ಗಣಕ ನಿಯಂತ್ರಿತ ಕಲೆ (Generative Art)

ಸ್ವಯಂನಿಯಂತ್ರಿತ, ಪೂರ್ವ ನಿರ್ಧಾರಿತ ಸಂಜ್ಞೆಗಳ ಮೂಲಕ ಅಸ್ತವ್ಯಸ್ತತೆಯಲ್ಲಿ (Randomness) ರೂಪುಗೊಳ್ಳುವ ಕಲೆಯೇ Generative ಕಲೆ.

1951 ಕಲಾವಿದ ಎಲ್ಸ್‌ವರ್ತ್ ಕೆಲ್ಲಿ (Ellsworth kelly) ಅವಕಾಶಗಳ ಪ್ರಕ್ರಿಯೆ (Chance Operations) ಮೂಲಕ ರೇಖಾಚಿತ್ರಗಳನ್ನು ರಚಿಸಿ ಹೊಸ ರೀತಿಯ ಕಲಾ ಮಾಧ್ಯಮಕ್ಕೆ ಮುನ್ನುಡಿ ಬರೆದ. ಹಾಗೆ ಸೃಷ್ಟಿಸಿದ ಚಿತ್ರವನ್ನು ಯಥಾವತ್ತಾಗಿ ಚಿತ್ರಪಟ (Canvas)ದ ಮೇಲೆ ಕಾಗದಗಳನ್ನು

*ಜಗತ್ತಿನಾದ್ಯಂತ ಅತಿ ಹೆಚ್ಚು ಬಳಸಲ್ಪಡುವ ಇಲ್ಲಸ್ಟ್ರೇಟರ್ ಗ್ರಾಫಿಕ್ ಕಲಾವಿದರಿಗೆ ಒಂದು ವರ. ತೈಲವರ್ಣ ಕೃತಿಗಳನ್ನು ರಚಿಸಲು ತಯಾರಾದ ವಿಶೇಷ ತಂತ್ರಾಂಶವೆಂದರೆ ಆರ್ಟ್‌ರೇಜ್ (artrage). ಇದರಲ್ಲಿಯ ವರ್ಣಗಳು ರಿಯಲ್ ಟೈಂನಲ್ಲಿ ಬೆರೆಯುವುದು ಅತಿ ವಿಶೇಷ. ತೈಲವರ್ಣದ ಗಾಢತೆ, ವರ್ಣದ ದಟ್ಟತೆ ಇದರ ಮತ್ತೊಂದು ವಿಶೇಷ.*

ಕತ್ತರಿಸಿ ಅಂಟಿಸುತ್ತಿದ್ದ. ಇದೇ ಮಾದರಿಯ ಪ್ರಯೋಗವನ್ನು ಅನುಸರಿಸುತ್ತಿದ ಮತ್ತೊಬ್ಬ ಕಲಾವಿದ ಫ್ರಾಂಕೋಯಿಸ್ ಮಾರ್ಲೆಟ್ (Francois morllet).

Generative ಕಲೆಯ ಮೂಲ ಅದರ ಅಸ್ತವ್ಯಸ್ತತೆ (Randomness)ಯಲ್ಲಿ ಅಡಗಿದೆ. ಈ ಅಸ್ತವ್ಯಸ್ತತೆ ಕೂಡ ಕೇವಲ ಅವಕಾಶ (Chance)ದಿಂದ ಅನುರಣಗೊಳ್ಳುತ್ತದೆ. ಈ ರೀತಿಯ ಪ್ರಯೋಗಾತ್ಮಕವಾದ Generative ಕಲೆಯಿಂದ ಸೃಷ್ಟಿಯಾಗುವ ಕಲಾಕೃತಿಗಳು ಅಜ್ಞಾತ ಆಯಾಮಗಳನ್ನು ತೆರೆದಿಡುತ್ತವೆ.

ಸಮಕಾಲೀನ ಅಮೆರಿಕನ್ Generative ಕಲಾವಿದ ಜೊಷು ಡೇವಿಸ್ (Joshua Devis) ಸಂಪೂರ್ಣವಾಗಿ ಪ್ರಯೋಗಾತ್ಮಕ ಕಲಾಕೃತಿಗಳನ್ನು ರಚಿಸುವ ಮೂಲಕ ವಿಸ್ತೃತ ರೀತಿಯಲ್ಲಿ Generative ಕಲೆಯನ್ನು ಜಗತ್ತಿಗೆ ಪರಿಚಯಿಸುತ್ತಿದ್ದಾರೆ. Generative ಕಲೆಯ ವೈಶಿಷ್ಟ್ಯವೆಂದರೆ ಅಂತಿಮವಾಗಿ ರೂಪುಗೊಳ್ಳುವ ಕಲಾಕೃತಿ ಊಹೆಗೂ ಮೀರಿದ ರೀತಿಯಲ್ಲಿ ವ್ಯಕ್ತವಾಗುತ್ತದೆ. ಕಲಾವಂತನ ಮನಸ್ಸಿನಲ್ಲಿ ಮೂಡುವ ಕಲ್ಪನೆಗಳನ್ನು ಮೀರಿ Generative ಕಲಾಕೃತಿ ರೂಪುಗೊಳ್ಳುತ್ತದೆ. ಅಜ್ಞಾತವನ್ನು ಪರಿಕ್ರಮಿಸುವ ನಿಟ್ಟಿನಲ್ಲಿ ಇದೊಂದು ಹೊಸ ಹೆಜ್ಜೆ.

## ಆಯಾಮದಾಚೆಗಿನ ಆಯಾಮ

'ಕಲಾವಿದನಿಗೆ ಆಯಾಮವಿದೆ, ಕಲಾವಿದನಿಗೂ ಕೂಡ'.

ಭಾರತೀಯ ಕಲಾ ಪರಂಪರೆಯಲ್ಲಿ ಮುಖ್ಯವಾಗಿ ಕಂಡುಬರುವ ಕಲಾಕೃತಿಗಳು ಎರಡು ಆಯಾಮಗಳದ್ದು. ಯಂತ್ರ, ತಂತ್ರ, ಕಾಂಗ್ರಾ, ಮಧುಬನಿ, ರಜಪೂತ, ಮೊಗಲ್, ಚಿಕಣಿ, ಪಟಚಿತ್ರ, ತಂಜಾವೂರು, ಮೈಸೂರು, ಬೆಂಗಾಲ್, ಮಾಳ್ವ ಹೀಗೆ ಹಲವಾರು ಭಾರತೀಯ ಚಿತ್ರ ಶೈಲಿಗಳು ಅನೂಚಾನವಾಗಿ ಪ್ರವಹಿಸುತ್ತಾ ಬಂದಿವೆ. ಆಧುನಿಕ ಸಂದರ್ಭದಲ್ಲಿ ಈ ಮೇಲ್ಕಂಡ ಶೈಲಿಗಳನ್ನು ಆಧರಿಸಿ ವಿಭಿನ್ನ ರೀತಿಯ ಪ್ರಯೋಗಗಳು ಕಲಾವಿದರಿಂದ ನಡೆಯುತ್ತಿವೆ. ಪ್ರಸ್ತುತ ಸಂದರ್ಭದಲ್ಲಿ ಮೂರನೇ ಆಯಾಮ (೩ಡಿ)ದಲ್ಲಿ ಪ್ರಯೋಗಗಳು ಸಮಾನಾಂತರವಾಗಿ ಬೆಳಕಿಗೆ ಬರುತ್ತಿವೆ. ಮೂರನೇ ಆಯಾಮದ ಕಲಾಕೃತಿಗಳ ಪರಿಕಲ್ಪನೆ ಭಾರತೀಯರಿಗೆ ಹೊಸತು.

## ರೇಖಾಚಿತ್ರ : ಒಂದು ಧ್ಯಾನ

ಬಿಂದುವಿನಿಂದ ಆರಂಭವಾಗುವ, ಕಾಲ/ಅವಕಾಶಗಳ ಪರಿಮಿತಿಯೊಳಗಿದ್ದೂ, ಇಲ್ಲದಂತೆ ಚಲಿಸುವ ರೇಖೆಯ ಪಯಣವೇ ಒಂದು ಧ್ಯಾನ. ಕಾಲಘಟ್ಟ ಪುರಾತನವೇ ಆಗಿರಲಿ ಅಥವಾ ಆಧುನಿಕವೇ ಆಗಿರಲಿ ಕಲಾವಿದನ ಅಭಿವ್ಯಕ್ತಿಯು ಎಂದೆಂದೂ ಚಿರನೂತನ.

ಭಾರತೀಯ ರೇಖಾಚಿತ್ರ ಶೈಲಿ ಕಾಂಗ್ರಾದಿಂದ ಹಿಡಿದು ಜಪಾನಿನ ಜೆನ್ (zen) ಕ್ಯಾಲಿಗ್ರಫಿಯ ವರೆಗೂ ರೇಖಾಚಿತ್ರಗಳ ಆಮತರ್ಯದ ಸೊಗಡಿನಲ್ಲಿ, ಆಯಾ ಪ್ರದೇಶಗಳ ಸಂಸ್ಕೃತಿ ಮತ್ತು ಪ್ರಜ್ಞೆಯ ಗಂಧವಿದೆ. ಮತ್ತೊಂದು ಕಾಲಕ್ಕೆ ಮನಸ್ಸನ್ನು ಹೊತ್ತೊಯ್ಯುವ ತೆಳು ರೇಖೆಗಳ ಸರಳ ರೂಪದ ಕಾಂಗ್ರಾ ಚಿತ್ರಗಳು, ಪೌರಾಣಿಕ ಹಾಗೂ ಐತಿಹಾಸಿಕ ವಿಷಯಗಳನ್ನು ಅನಾವರಣ ಮಾಡುತ್ತವೆ.

ನಿಶ್ಯಬ್ದವಾಗಿ ಹರಿಯುವ ನದಿ ತಟದಲ್ಲೊಂದು ಜೆನ್ (zen) ಆಶ್ರಮದ ದ್ವಾರದಲ್ಲಿ ರಾರಾಜಿಸುವ ಕ್ಯಾಲಿಗ್ರಫಿ ರೇಖೆಗಳು, ಚಹಾ ಘಮಲಿನ ಜೊತೆಗೆ ಕುಂಚದಿಂದ ಮೂಡುವ ಕಪ್ಪು ಶಾಯಿಯ ದಪ್ಪನೆಯ ರೇಖೆಗಳು ಧ್ಯಾನಸ್ಥ ಸ್ಥಿತಿಯಲ್ಲಿರುವಂತಿರುತ್ತದೆ.

## ರೇಖಾಧ್ಯಾನಕ್ಕೆ ತಂತ್ರಜ್ಞಾನದ ಲೇಪ

ತಂತ್ರಜ್ಞಾನ ವಿಕಾಸವಾದಂತೆಲ್ಲಾ, ಕಲಾಜಗತ್ತಿನಲ್ಲಿಯೂ ಕೂಡ ವಿಭಿನ್ನ ರೀತಿಯ ಪರಿಕರಗಳು ಲಭ್ಯವಾಗಿವೆ. ಗಣಕ ತಂತ್ರಾಂಶದ ಸಾಮರ್ಥ್ಯ ಹೆಚ್ಚಿದಂತೆಲ್ಲಾ ಕಲ್ಪನೆಗಳಿಗೂ ಮಿತಿ ಇದೆ ಎನ್ನಿಸುವ ಹಾಗೆ ರೇಖಾಚಿತ್ರಗಳ ಆಯಾಮದಲ್ಲಿ ಹೊಸದೊಂದು ಶಕೆಯೇ ಆರಂಭವಾಗಿದೆ.

ಕಾಗದ, ಬಣ್ಣ ಹಾಗೂ ಕುಂಚಕ್ಕೆ ಸೀಮಿತವಾಗಿದ್ದ ರೇಖಾಚಿತ್ರದ ಜಗತ್ತು ಗಣಕ ಕ್ರಾಂತಿ ಯಿಂದಾಗಿ ವಿವಿಧ ರೀತಿಯ ಪರಿಕರಗಳನ್ನು ಉಪಯೋಗಿಸುವ ಅವಕಾಶ ಲಭ್ಯವಾಗಿದೆ. ಕೇವಲ ಅಂಗೈಯಗಲ ಸ್ಥಳಾವಕಾಶದಲ್ಲಿ ಅಸಂಖ್ಯ ಬಣ್ಣಗಳು, ಕುಂಚಗಳು ಹಾಗೂ ವಿವಿಧ ರೀತಿಯ ಸಲಕರಣೆಗಳಿಂದಾಗಿ ಕಲಾವಿದನಿಗೆ ಅಮೂಲ್ಯವಾದ ನಿಧಿ ಸಿಕ್ಕಂತಾಗಿದೆ.

## ಡಿಜಿಟಲ್ ಪಯಣ

ತನ್ನ ಸ್ವಸಂತೋಷಕ್ಕಾಗಿ ಚಿತ್ರ ರಚನೆಯಲ್ಲಿ ತೊಡಗಿರುತ್ತಿದ್ದ ಕಲಾವಿದ, ವ್ಯಾವಹಾರಿಕ ಪ್ರಪಂಚದ ಸೋಂಕಿಲ್ಲದೆ ಅದ್ಭುತವಾದ ಕಲಾಕೃತಿಗಳನ್ನು ಸೃಷ್ಟಿಸಿದ. ಕಾಲದ ಅಲೆಯಲ್ಲಿ ಬದಲಾವಣೆಗಳ ಮಹಾಪೂರದಲ್ಲಿ ಕುಂಚ ಜಗತ್ತು ತೊಯ್ದಿದೆ.

ಆಧುನಿಕ ಸಂದರ್ಭದಲ್ಲಿ ವಿಭಿನ್ನ ಕ್ಷೇತ್ರಗಳಲ್ಲಿ, ವಿಭಿನ್ನ ರೂಪಗಳಲ್ಲಿ ಕುಂಚದ ಮಾಂತ್ರಿಕತೆ ಹಾಸು ಹೊಕ್ಕಾಗಿದೆ. ಮುದ್ರಣ ಮಾಧ್ಯಮ, ಆಭರಣ ವಿನ್ಯಾಸ, ವಾಸ್ತು ವಿನ್ಯಾಸ, ಆನಿಮೇಷನ್ ಮುಂತಾದ ಕ್ಷೇತ್ರಗಳಲ್ಲಿ ರೇಖಾಚಿತ್ರದ ಅವಲಂಬನೆ ಮತ್ತು ಅಗತ್ಯ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಸಾಂಪ್ರದಾಯಿಕ ಪದ್ಧತಿಯಾಗಿದ್ದ ರೇಖಾ ಚಿತ್ರಗಳ ಪ್ರಯೋಜನಗಳು ಗಣಕ ಸಾಮರ್ಥ್ಯದಿಂದಾಗಿ ಇನ್ನೂ ವೈವಿಧ್ಯಮಯ ರೀತಿಯಲ್ಲಿ ಬಳಕೆಯಾಗುತ್ತಿದೆ.

*ಈಗ ಅತಿ ಹೆಚ್ಚು ಚಾಲ್ತಿಯಲ್ಲಿರುವ ತ್ರೀಡಿ ಕಲೆಯ ಉಪಯೋಗಗಳು ಹಲವಾರು. ಸಿನೆಮಾ, ಅನಿಮೇಷನ್, ಮುದ್ರಣ, ಜಾಹಿರಾತು ಹಾಗೂ ಹಲವಾರು ಕ್ಷೇತ್ರಗಳಲ್ಲಿ ಇದರ ಬಳಕೆ ಅಧಿಕವಾಗಿದೆ. ಅತೀ ವಾಸ್ತವವನ್ನು ಕಲ್ಪನೆಗೂ ಮೀರಿದ ರೀತಿಯಲ್ಲಿ ಸೃಷ್ಟಿಸಲು ಸಾಧ್ಯವಾಗಿರುವುದೇ ತ್ರೀಡಿ ತಂತ್ರಾಂಶದಿಂದ. ಅನಿಮೇಷನ್‌ನಲ್ಲಿ ಬಳಸಲಾಗುವ ಕರಡು ರೇಖಾ ಚಿತ್ರಗಳು ಕೂಡಾ ತ್ರೀಡೀ ತಂತ್ರಾಂಶದ ಕೂಸು. ಮುದ್ರಣ ಮಾಧ್ಯಮದಲ್ಲಿ ಸ್ಥಿರ ರೇಖಾಚಿತ್ರದ ಉಪಯೋಗ, ತ್ರೀಡೀ ತಂತ್ರಾಂಶದಿಂದ ಸಾಧ್ಯವಾಗಿದೆ.*



ತ್ರೀಡಿ ಕಲಾಕೃತಿ

## ರೇಖಾಚಿತ್ರಗಳ ಡಿಜಿಟಲ್ ಆಯಾಮ

ಡಿಜಿಟಲ್ ಕಲೆಯು ಒಂದು ಕಲೆಯೇ? ಇಂತಹದ್ದೊಂದು ಪ್ರಶ್ನೆ ಸದ್ಯಕ್ಕೆ ಚಾಲ್ತಿಯಲ್ಲಿದೆ. ಅನೇಕ ವಿವರಣೆಗಳು, ಸಮರ್ಥನೆಗಳು ಮತ್ತು ಅದರ ಅಗತ್ಯತೆ ಈ ಕುರಿತಂತೆ ಚರ್ಚೆ ನಡೆಯುತ್ತಲೇ ಇದೆ. ಕಲಾವಿದನ ಆಂಗಿಕ ಚಲನೆ, ತನ್ನ ಸುತ್ತಲಿನ ಪರಿಸರದೊಂದಿಗೆ ಸ್ಪಂದಿಸುವ ಪರಿ, ಅದರಿಂದಾಗುವ ಭಾವಸ್ಫುರಣೆ, ಸಮಗ್ರ ಅಭಿವ್ಯಕ್ತಿಯಿಂದ ಸೃಷ್ಟಿಯಾಗುವ ಕಲಾಕೃತಿ ಈ ರೀತಿಯವಾದ ಸರಣಿಯೊಂದಾದರೆ ಮತ್ತೊಂದು ವರ್ಗದವರ ವಾದವೆಂದರೆ "ಬದಲಾಗಿರುವುದು ಸಲಕರಣೆಗಳು ಮಾತ್ರ, ಕಲಾವಿದನಲ್ಲ' ಎಂಬುದು.

ಮುದ್ರಣ ಕ್ಷೇತ್ರದಲ್ಲಿ ವ್ಯಂಗ್ಯ ಚಿತ್ರಗಳು, ಇಲ್ಲಸ್ಟ್ರೇಷನ್‌ಗಳು, ವಿನ್ಯಾಸಗಳು ಹೆಚ್ಚು ಪ್ರಮಾಣದಲ್ಲಿ ಡಿಜಿಟಲ್ ಕಲೆಯನ್ನೇ ಆಧರಿಸಿದೆ. ಅತೀ ಕಡಿಮೆ ಸಮಯದಲ್ಲಿ ಕ್ಷಿಪ್ರವಾಗಿ ಮತ್ತೆ ಸ್ಪಷ್ಟವಾಗಿ



ಐಪ್ಯಾಡ್‌ನಲ್ಲಿ ರೂಪಿಸಿರುವ ಕಲಾಕೃತಿ

ರಚಿಸುವುದಕ್ಕೆ ಸಹಕಾರಿಯಾಗಿದೆ. ಒಂದೊಂದು ಶೈಲಿಯಲ್ಲೂ ಒಂದೊಂದು ತಂತ್ರಾಂಶಗಳು ಲಭ್ಯವಿವೆ. ಆಧುನಿಕತೆಯ ಸ್ಪರ್ಶದಿಂದಾಗಿ ಮುದ್ರಣ ಮಾಧ್ಯಮ ಹಿಂದೆಂದಿಗಿಂತಲೂ ಹೆಚ್ಚು ಆಕರ್ಷಕವಾಗಿದೆ. ತಂತ್ರಾಂಶಗಳ ವೈವಿಧ್ಯತೆಯಿಂದಾಗಿ ತ್ವರಿತವಾಗಿ ಹಾಗೂ ಹೆಚ್ಚು ಪರಿಣಾಮ ಕಾರಿಯಾಗಿ ರೇಖಾಚಿತ್ರಗಳನ್ನು ರಚಿಸಬಹುದಾಗಿದೆ. ಉದಾ: ವ್ಯಂಗ್ಯಚಿತ್ರ ರಚನೆಗೆಂದೇ ಮೀಸಲಾದ ಹಲವಾರು ತಂತ್ರಾಂಶಗಳಿವೆ. ಅದರಲ್ಲಿ ಮುಖ್ಯವಾಗಿ ಮಾಂಗಾ ಸ್ಟುಡಿಯೋ (manga studio), ಕ್ಲಿಪ್ ಪೇಂಟ್ (clip paint). ಈ ತಂತ್ರಾಂಶಗಳ ವೈಶಿಷ್ಟ್ಯವೆಂದರೆ ಆರಂಭ ಮತ್ತು ಅಂತಿಮ ಬಿಂದುವಿನಲ್ಲಿ ತೆಳುವಾಗಿ ಮತ್ತು ಮಧ್ಯದ ಭಾಗದಲ್ಲಿ ದಪ್ಪನಾಗಿ ತೋರುವಂತೆ

ಸೃಜಿಸಲಾಗಿದೆ. ವ್ಯಂಗ್ಯ ಚಿತ್ರ ಕಲಾವಿದರಿಗೆ ಇದೊಂದು ಅದ್ಭುತ ಪರಿಕರ. ಇಲ್ಲಸ್ಟ್ರೇಷನ್‌ಗಳನ್ನು ರಚಿಸುವುದಕ್ಕಾಗಿ ವಿವಿಧ ರೀತಿಯ ತಂತ್ರಾಂಶಗಳಿವೆ. ಅದರಲ್ಲಿ ಮುಖ್ಯವಾಗಿ ಅಡೋಬ್ ಇಲ್ಲಸ್ಟ್ರೇಟರ್ (adobe illustrator), ಕೃತ (krita), ಇಂಕ್‌ಸ್ಕೇಪ್ (inkscape).

ಜಗತ್ತಿನಾದ್ಯಂತ ಅತಿ ಹೆಚ್ಚು ಬಳಸಲ್ಪಡುವ ಇಲ್ಲಸ್ಟ್ರೇಟರ್ ಗ್ರಾಫಿಕ್ ಕಲಾವಿದರಿಗೆ ಒಂದು ವರ.

ತೈಲವರ್ಣ ಕೃತಿಗಳನ್ನು ರಚಿಸಲು ತಯಾರಾದ ವಿಶೇಷ ತಂತ್ರಾಂಶವೆಂದರೆ ಆರ್ಟ್‌ರೇಜ್ (artrage). ಇದರಲ್ಲಿಯ ವರ್ಣಗಳು ರಿಯಲ್ ಟೈಂನಲ್ಲಿ ಬೆರೆಯುವುದು ಅತಿ ವಿಶೇಷ. ತೈಲವರ್ಣದ ಗಾಢತೆ, ವರ್ಣದ ದಟ್ಟತೆ ಇದರ ಮತ್ತೊಂದು ವಿಶೇಷ. ಇದೇ ವರ್ಗದ ಮತ್ತೊಂದು ತಂತ್ರಾಂಶವೆಂದರೆ ಕೃತ (krita). ಇದರ ಮೂಲ ಸಲಕರಣೆಯೇ ಸಿಮೆಟ್ರಿ ರೇಖಾಚಿತ್ರ ರಚನೆ. ಚಿತ್ರಕಥಾ ಕಾದಂಬರಿಗಳನ್ನು ರಚಿಸುವುದಕ್ಕೆ ಸೃಜಿಸಲ್ಪಟ್ಟ ತಂತ್ರಾಂಶಗಳಿವು.

ಜಲವರ್ಣ ಚಿತ್ರಗಳನ್ನು ರಚಿಸಲಿಕ್ಕೆಂದೇ ಅಭಿವೃದ್ಧಿಪಡಿಸಲಾದ ತಂತ್ರಾಂಶವೆಂದರೆ ರೆಬೆಲ್ಲೆ (rebelle). ರೆಬೆಲ್ಲೆ ಕಣ ಆಧಾರಿತ (particle based) ತಂತ್ರಾಂಶವಾಗಿದೆ. ಸಾಂಪ್ರದಾಯಿಕ ಜಲವರ್ಣ ಚಿತ್ರ ರಚನೆಯಂತೆಯೇ ಈ ತಂತ್ರಾಂಶವನ್ನು ಪರಿಣಾಮಕಾರಿಯಾಗಿ ಬಳಸಬಹುದಾಗಿದೆ. ಒಣಗಿದ, ಒದ್ದೆಯಾದ, ತೇವ ಹೀರುವ ಕಾಗದವು ನೀರಿನಿಂದ ತೊಟ್ಟಿಕ್ಕುವ ಹಾಗೆ ಪರಿಣಾಮಗಳನ್ನು ಈ ತಂತ್ರಾಂಶ ಒಳಗೊಂಡಿದೆ.

## ಮೂರನೇ ಆಯಾಮ (3D)

ಕಲಾವಿದ ಹಾಗೂ ಗಣಿತಜ್ಞ ಬೆಂಜಮಿನ್ ಲಪೋಸ್ಕಿ (Benjamin laposky) ಕ್ಯಾಥೋಡ್ ರೇ ಆಸ್ಕಿಲೋಸ್ಕೋಪ್ (Cathode Ray Ossciloscope) ಮೂಲಕ ವಿದ್ಯುತ್ ತರಂಗಗಳನ್ನು ಆಧರಿಸಿ ರಚಿಸಿದ ಕಲಾಕೃತಿಯೇ ಮ್ಯಾಜಿಕ್ ಸ್ಕ್ವೇರ್ ಪಝುಲ್, ಮೂರನೇ ಆಯಾಮದೆಡೆಗೆ ಒಂದು ಪುಟ್ಟ ಹೆಜ್ಜೆ. ತದನಂತರ ಅನೇಕ ರೀತಿಯ ಪ್ರಯೋಗಗಳು ಮೂರನೇ ಆಯಾಮದ ಬೆಳವಣಿಗೆಗೆ ಪೂರಕವಾದವು.

ಗಣಕ ಸಾಮರ್ಥ್ಯ ಹಾಗೂ ತಂತ್ರಾಂಶಗಳ ಅಭಿವೃದ್ಧಿಯಾದಂತೆಲ್ಲಾ ಕಲಾಕೃತಿಗಳನ್ನು ರಚಿಸುವ ಸಾಧ್ಯತೆಗಳು ಕೂಡ ವಿಸ್ತಾರವಾಯಿತು. ಮುದ್ರಣ ಮಾಧ್ಯಮ ಹಾಗೂ ವಿದ್ಯುನ್ಮಾನ ಮಾಧ್ಯಮದಲ್ಲಿ ವ್ಯಾಪಕವಾಗಿ ಮೂರನೇ ಆಯಾಮ ಬಳಕೆಯಾಗುತ್ತಿದೆ. ಮೂರನೇ ಆಯಾಮದ ಅದ್ಭುತ ಕೊಡುಗೆಯೆಂದರೆ ಕಲ್ಪನೆಯ ಮರು ಸೃಷ್ಟಿಯನ್ನು ಯಥಾವತ್ತಾಗಿ ಮಾಡುವುದು. ಕೇವಲ ಚಿತ್ರಪಟ (Canvas)ಕ್ಕೆ ಸೀಮಿತವಾಗದೆ ವಿಶಾಲ ರೀತಿಯಲ್ಲಿ ಬಳಸಿಕೊಳ್ಳಬಹುದಾಗಿದೆ.

ಮನರಂಜನೆ, ವಿಜ್ಞಾನ, ವೈದ್ಯಕೀಯ, ಶಿಕ್ಷಣ, ಕೈಗಾರಿಕೆ, ಪ್ರವಾಸ ಹೀಗೆ ಹತ್ತಾರು ಕ್ಷೇತ್ರಗಳಲ್ಲಿ ಮೂರನೇ ಆಯಾಮದ ಕೊಡುಗೆ ಮುಂದುವರಿಯುತ್ತಿದೆ.

## ರೇಖಾ ಆಯಾಮದ ಮೂರನೆಯ ಕಣ್ಣು

ಈಗ ಅತಿ ಹೆಚ್ಚು ಚಾಲ್ತಿಯಲ್ಲಿರುವ ತ್ರೀಡಿ(3D) ಕಲೆಯ ಉಪಯೋಗಗಳು ಹಲವಾರು. ಸಿನೆಮಾ, ಅನಿಮೇಷನ್, ಮುದ್ರಣ, ಜಾಹಿರಾತು ಹಾಗೂ ಹಲವಾರು ಕ್ಷೇತ್ರಗಳಲ್ಲಿ ಇದರ ಬಳಕೆ ಅಧಿಕವಾಗಿದೆ. ಅತೀ ವಾಸ್ತವವನ್ನು ಕಲ್ಪನೆಗೂ ಮೀರಿದ ರೀತಿಯಲ್ಲಿ ಸೃಷ್ಟಿಸಲು ಸಾಧ್ಯವಾಗಿರುವುದೇ ತ್ರೀಡಿ




ಇಲಸ್ಟ್ರೇಷನ್

ತಂತ್ರಾಂಶದಿಂದ. ಅನಿಮೇಷನ್‌ನಲ್ಲಿ ಬಳಸಲಾಗುವ ಕರಡು ರೇಖಾಚಿತ್ರಗಳು ಕೂಡಾ ತ್ರೀಡಿ ತಂತ್ರಾಂಶದ ಕೂಸು. ಮುದ್ರಣ ಮಾಧ್ಯಮದಲ್ಲಿ ಸ್ಥಿರ ರೇಖಾಚಿತ್ರದ ಉಪಯೋಗ, ತ್ರೀಡಿ ತಂತ್ರಾಂಶದಿಂದ ಸಾಧ್ಯವಾಗಿದೆ.

ಡಿಜಿಟಲ್ ಶಿಲ್ಪಕಲೆಗೆ ಉತ್ತಮ ತಂತ್ರಾಂಶವೆಂದರೆ ಝೀ ಬ್ರಷ್ (z-brush). ಮೂರು ಆಯಾಮದಲ್ಲಿ ಊಹೆಗೂ ಮೀರಿದ ರೀತಿಯಲ್ಲಿ ಈ ತಂತ್ರಾಂಶದ ನೆರವಿನಿಂದಾಗಿ ಡಿಜಿಟಲ್ ಶಿಲ್ಪವನ್ನು ಸೃಷ್ಟಿಸಬಹುದಾಗಿದೆ. ಅನೇಕ ರೀತಿಯಲ್ಲಿ ಇಲ್ಲಸ್ಟ್ರೇಷನ್‌ಗಳನ್ನು ಬರೆಯುವಲ್ಲಿ ಈ ತಂತ್ರಾಂಶ ಅತಿ ಹೆಚ್ಚು ಉಪಯುಕ್ತವಾಗಿದೆ. ಪ್ರಮುಖವಾಗಿ ಈ ಸಾಲಿಗೆ ಸೇರುವ ಮತ್ತಷ್ಟು

ತಂತ್ರಾಂಶಗಳೆಂದರೆ ಮಡ್‌ಬಾಕ್ಸ್ (mudbox) , ಬ್ಲೆಂಡರ್ (blender), ತ್ರಿಡಿ ಕೋಟ್ (3Dcoat). ನೇರವಾಗಿ ಆನ್‌ಲೈನ್‌ನಲ್ಲಿ ರಚಿಸಬಹುದಾದ ತಂತ್ರಾಂಶವೆಂದರೆ ಸ್ಕಲ್ಪ್ ಜಿ ಎಲ್ (sculpt GL).

## ಮಿಥ್ಯಾ ವಾಸ್ತವದಲ್ಲಿ ರೇಖಾಚಿತ್ರಗಳ ಅನಾವರಣ

ಕಲಾಜಗತ್ತಿನಲ್ಲಿ ಆಧುನಿಕ ತಂತ್ರಾಂಶಗಳ ವಿಕಾಸದಿಂದ ಮಿಥ್ಯಾ ವಾಸ್ತವದಲ್ಲಿ ರೇಖಾಚಿತ್ರಗಳ ರಚನೆ ಒಂದು ದೊಡ್ಡ ನೆಗೆತವೆಂದೇ ಹೇಳಬಹುದು. ಆಧುನಿಕ ವಿಶ್ವಕರ್ಮನ ಮತ್ತೊಂದು ಅವತಾರವೂ ಹೌದು. ಮಿಥ್ಯಾವಾಸ್ತವದಲ್ಲಿ ರೇಖಾಚಿತ್ರಗಳನ್ನು ಬರೆಯುವುದಕ್ಕೆ ಕ್ಯಾನ್ವಾಸ್ ಬೇಕಿಲ್ಲ. ಕಲಾವಿದನ ಸುತ್ತಲೂ ಇರುವ ಅವಕಾಶವೇ ಆತನ ಕ್ಯಾನ್ವಾಸ್. ತಲೆಗೆ ಧರಿಸಲಾದ ಕನ್ನಡಕ ದಂತಹ (headgear) ಉಪಕರಣ ಮತ್ತು ಅದಕ್ಕೆಂದೇ ರಚಿಸಲಾದ ತಂತ್ರಾಂಶದ ನೆರವಿನಿಂದ ವರ್ಣಗಳ ಮಾಯಾಜಗತ್ತನ್ನೇ ಪ್ರವೇಶಿಸಬಹುದು. ಧರಿಸಿದ ಕನ್ನಡಕದ ಮೂಲಕ ಕಲಾವಿದನ ಕಣ್ಣೆದುರಿಗೆ ಗೋಚರಿಸುವುದು ಖಾಲೀ ಅವಕಾಶ ಹಾಗೂ ಒಂದಷ್ಟು ಚಿತ್ರ ರಚನೆಗೆ ಪೂರಕವಾದ ಬಣ್ಣಗಳು ಮತ್ತು ಕುಂಚಗಳು. ಇದರ ಮಾಂತ್ರಿಕತೆ ಹೇಗಿದೆ ಎಂದರೆ ನೀವು ರಚಿಸುವ ಕಲಾಕೃತಿಯ ತುಂಬೆಲ್ಲಾ ನೀವು ಸಂಚರಿಸ ಬಹುದು. ಗೂಗಲ್ ಖ್ಯಾತಿಯ ಟಿಲ್ಟ್ ಬ್ರಷ್ (tiltbrush) ಇದೀಗ ಲಭ್ಯವಾಗಿರುವ ಮಿಥ್ಯಾ ವಾಸ್ತವದ ತಂತ್ರಾಂಶ.

## ಟ್ಯಾಬ್ಲೆಟ್ ಕಲೆ

ಕೇವಲ ಸಂವಹನ ಮಾಧ್ಯಮಕ್ಕೆ ಸೀಮಿತವಾಗಿದ್ದ ಮೊಬೈಲ್ ಹಾಗೂ ಟ್ಯಾಬ್ಲೆಟ್‌ಗಳು ಮಿನಿ ಕ್ಯಾನ್ವಾಸ್‌ಗಳಾಗಿ ಪರಿವರ್ತಿತಗೊಂಡಿವೆ. ಕಲಾವಿದನ ಸಂಚಾರಿ ಕಿಟ್ ಆಗಿದೆ. ಮೊಬೈಲ್‌ಗಳಲ್ಲಿ ವಿಂಡೋಸ್ ರಚಿತ ಕಲಾ ತಂತ್ರಾಂಶಗಳಿದ್ದರೂ ಅತಿ ಹೆಚ್ಚು ಮನ್ನಣೆ ಹಾಗೂ ವಿಶ್ವಾಸಾರ್ಹತೆ ಪಡೆದ ತಂತ್ರಾಂಶಗಳು ಲಭ್ಯವಿರುವುದು ಐಒಎಸ್ ನಲ್ಲಿ.

ಐಪ್ಯಾಡ್‌ಗೆಂದೇ ಸೃಷ್ಟಿಸಲಾದ ಹಲವಾರು ತಂತ್ರಾಂಶಗಳಲ್ಲಿ ಪ್ರಮುಖವಾದವು ಪ್ರೋಕ್ರಿಯೇಟ್ (procreate) ಮತ್ತು ಜೆನ್‌ಬ್ರಷ್ (zenbrush). ಈ ತಂತ್ರಾಂಶಗಳು ಡೆಸ್ಕ್‌ಟಾಪ್ ಅಪ್ಲಿಕೇಶನ್ ಗಳಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತವೆ.

❑

# ಕರಾವಳಿಯ ಸಾಂಪ್ರದಾಯಿಕ ಕಲೆಗಳಲ್ಲಿ ರೇಖೆಗಳ ಮಹತ್ವ

♦ ಪುರುಷೋತ್ತಮ ಅಡ್ವೆ

## ಪ್ರಸ್ತಾವನೆ

ಎರಡು ಬಿಂದುಗಳು ಒಂದರೊಡನೊಂದು ಸೇರಿದಾಗ ರೂಪುಗೊಳ್ಳುವುದೇ ರೇಖೆ. ಇದು ರೇಖೆಯ ಅತ್ಯಂತ ಸರಳ ನಿರೂಪಣೆ. ರೇಖೆ ಎನ್ನುವುದು ಒಂದರಿಂದ ಇನ್ನೊಂದನ್ನು ಬೇರ್ಪಡಿಸುತ್ತದೆ ಎಂದಾಗ ಈ ನಿರೂಪಣೆ ಕ್ಲಿಷ್ಟವಾಗುತ್ತದೆ. ರೇಖೆ ಎಂದಾಗ ಅಲ್ಲಿ ರೇಖೆ ಇರಲೇ ಬೇಕೆಂದೇನಿಲ್ಲ. ಯಾವುದೇ ಭೌಗೋಳಿಕ ರಚನೆ, ವಸ್ತು, ಪ್ರಾಣಿ, ಪಕ್ಷಿ, ಮನುಷ್ಯ, ರೂಪ, ಲಾವಣ್ಯ, ಭಾವನೆ–ಒಟ್ಟಾರೆ ಪ್ರಕೃತಿ, ಜೀವ, ಭಾವ, ಮಾತು, ಮೌನ, ಸಂಗತಿಗಳು, ಪ್ರಚಲಿತ ಎಲ್ಲವನ್ನೂ ಪ್ರತ್ಯೇಕಗೊಳಿಸುತ್ತಾ, ಆಯಾಯ ಪಾತ್ರಕ್ಕೆ ಆಯಾಯ ವೈಶಿಷ್ಟ್ಯಗಳನ್ನು ತುಂಬುವ ಕೆಲಸ ರೇಖೆ ಮಾಡುತ್ತದೆ ಎಂದಾಗ ರೇಖೆಯ ನಿರೂಪಣೆ

> ಹೆಬ್ಬಾರರು ತಮ್ಮ ಕಲಾನೈಪುಣ್ಯವನ್ನು ತೋರಲು ರೇಖೆಗಳನ್ನು ಆಯ್ದುಕೊಂಡರು ಎನ್ನುವದಕ್ಕಿಂತ ರೇಖೆಗಳು ಅವರನ್ನು ಆಯ್ದುಕೊಂಡವು ಎನ್ನಬಹುದು. ಏಕೆಂದರೆ, ನಾಗಮಂಡಲ, ಯಕ್ಷಗಾನ ಸೇರಿದಂತೆ ಕರಾವಳಿಯ ಅನೇಕ ಸಾಂಸ್ಕೃತಿಕ ಚಿತ್ರಣಗಳು ಅವರ ಕೈಯಲ್ಲಿ ಸುಲಲಿತವಾಗಿ ಹೊರಹೊಮ್ಮಿದ ಪರಿಯನ್ನು ನೋಡಿದರೆ ರೇಖೆಗಳು ಅವರಿಗೆ ಒಲಿದುಬಿಟ್ಟಿವೆ ಎನಿಸುತ್ತವೆ. ಅವರ ರೇಖೆಗಳು ಬರಿಯ ಚಿತ್ರಗಳಾಗಿರಲಿಲ್ಲ. ಅವುಗಳು ಲಯ ಮತ್ತು ಭಾವನೆಗಳ ಒಟ್ಟು ಸಮ್ಮಿಲನವಾಗಿದ್ದವು. ಈ ಮಾಯಾಸದೃಶ ಸ್ಪರ್ಶ ದೊರೆತಾಗ ರೇಖೆಗಳು ಕಲಾಕೃತಿಗಳಾಗಿ ಬಿಡುತ್ತವೆ.

ಇನ್ನಷ್ಟು ಕ್ಲಿಷ್ಟವಾಗುತ್ತದೆ. ಈ ಪ್ರತ್ಯೇಕತೆಗಳು ಹೇಗೆ ಸಾಧ್ಯವಾಯಿತು ಎಂದು ಆಲೋಚಿಸಿದಾಗ, ಇದೆಲ್ಲ ರೇಖೆ ಒಂದರಿಂದಲೇ ಅಥವಾ ಅದರ ವಿವಿಧ ರೂಪಗಳಿಂದ ಮಾತ್ರವಾಗಿಲ್ಲ ಎನ್ನುವುದು ಅರ್ಥವಾಗುತ್ತದೆ. ರೇಖೆಗೆ ಸಂಸ್ಕೃತಿಯ ಸಾಂಗತ್ಯ ದೊರಕಿದಾಗ ಮಾತ್ರ ರೇಖೆಗಳಲ್ಲಿ ವಿಭಿನ್ನ ವೈಶಿಷ್ಟ್ಯಗಳನ್ನು ಕಾಣಬಹುದು.

ಕರ್ನಾಟಕ ಕರಾವಳಿಯ ಕಲೆ ಅಥವಾ ಇದು ಕರ್ನಾಟಕದ ಕರಾವಳಿಯ ಭಾಗದ ವಿಶೇಷ ಎಂದು ನಾವು ಜಗತ್ತಿನ ಯಾವುದೇ ಮೂಲೆಯಲ್ಲಿ ನಿಂತು ಆಯ್ದು ತೋರಿಸಬಹುದಾದರೆ ಅದಕ್ಕೆ ಕಾರಣ ಅಲ್ಲಿನ ಸಂಸ್ಕೃತಿ. ಹಾಗಾಗಿ ಕರಾವಳಿಯ ಕಲೆಗಳಲ್ಲಿ ರೇಖೆಗಳ ವೈಶಿಷ್ಟ್ಯವನ್ನು ಅರಿಯ ಬೇಕಾದರೆ ಕರಾವಳಿಯ ಸಂಸ್ಕೃತಿಯ ವೈವಿಧ್ಯವನ್ನು ಅರಿಯಬೇಕು.

## ತುಳುನಾಡಿನ ಜನಪದ ಪರಂಪರೆಯಲ್ಲಿ ರೇಖಾತತ್ತ್ವ

ಕರಾವಳಿ ಕರ್ನಾಟಕದ ಉಡುಪಿ-ಮಂಗಳೂರು ಭಾಗ ಎಂದರೆ ತುಳುನಾಡು. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ ಮತ್ತು ಪೂರ್ವದಲ್ಲಿ ಸಹ್ಯಾದ್ರಿ ಪರ್ವತಗಳೆಂಬ ಭೌಗೋಳಿಕ ರೇಖೆಗಳಿಂದ ತುಳುನಾಡು ಆವೃತಗೊಂಡಿದೆ. ಇಲ್ಲಿನ ಜಾನಪದ ಸಾಂಸ್ಕೃತಿಕ ಪರಂಪರೆ ಅತ್ಯಂತ ಶ್ರೀಮಂತ ವಾಗಿದೆ. ಇಲ್ಲಿನ ನಾಗ ಬ್ರಹ್ಮಸ್ಥಾನ, ದೈವದ ಮನೆ, ಸಾನ, ಆಲಡೆ, ಗರಡಿ, ಅಗೆಲ್, ಕೋಲ, ಢಕ್ಕೆಬಲಿ, ಬ್ರಹ್ಮಕಲಶ, ನಾಗಮಂಡಲ ಮೊದಲಾದವುಗಳು ಈ ಜಾನಪದ ಪರಂಪರೆಯ ಕೊಡುಗೆಗಳು. ಈ ಪರಂಪರೆ ಎಂದು, ಹೇಗೆ ಉದಯವಾಯಿತು ಎಂದು ಲೆಕ್ಕ ಹಾಕಲು ಹೋದರೆ ಲಕ್ಷಾಂತರ ವರ್ಷಗಳ ಹಿಂದಿನ ಐತಿಹಾಸಿಕ ದಾಖಲೆಗಳಿಗಾಗಿ ಹುಡುಕಬೇಕಾಗುತ್ತದೆ. ಜನಪದರ ಜನ ಜೀವನದಿಂದ ಸಂಸ್ಕೃತಿಯನ್ನು ಯಾವತ್ತೂ ಬೇರೆ ಮಾಡಿ ನೋಡಲು ಸಾಧ್ಯವಿಲ್ಲ. ಸಂಸ್ಕೃತಿಯು ನಾಗರಿಕತೆಯ ಜೊತೆಜೊತೆಗೇ ಸಮಾನಾಂತರವಾಗಿ ಬೆಳೆದು ಬರುವಂಥದ್ದು. ಹಾಗಾಗಿ ತುಳುನಾಡಿನ ಜಾನಪದ ಸಂಸ್ಕೃತಿಯ ಪರಂಪರೆಯ ಕೊಂಡಿ ನಾಗರಿಕತೆಯ ವಿಕಾಸದ ಜೊತೆಗೇ ಬೆಸೆದುಕೊಂಡಿದೆ. ಹಾಗೆಯೇ ಕಲೆ ಎನ್ನುವುದು ಜನಪದರ ಜನಜೀವನದಿಂದ ಎಂದೂ ಬೇರೆಯಾಗಿ ಬೆಳೆದದ್ದಿಲ್ಲ. ಅದು ಜನಪದರ ಜೀವನದಲ್ಲೇ ಹಾಸು ಹೊಕ್ಕಾಗಿತ್ತು. ಹಾಗಾಗಿ ಕಲೆಯು 'ಕಲೆ' ಎನ್ನುವ ಪ್ರತ್ಯೇಕ ದೃಷ್ಟಿಕೋನದಿಂದ ಪೋಷಣೆ ಪಡೆದುದಕ್ಕಿಂತ ಹೆಚ್ಚಾಗಿ, ತುಳುವರ ದೈನಂದಿನ ಜೀವನದ ಅಂಶವಾಗಿತ್ತು. ಅವರ ನಡೆನುಡಿ, ಆಚರಣೆ, ಆರಾಧನೆ, ಸಂಪ್ರದಾಯ, ಪದ್ಧತಿ, ಕಟ್ಟುಪಾಡುಗಳು, ಆಚಾರವಿಚಾರ, ಉಡುಗೆತೊಡುಗೆ ಎಲ್ಲದರಲ್ಲೂ 'ಕಲೆ' ಯಾವ ವಿಶೇಷ



**ಯಜ್ಞಕುಂಡದ ಸುತ್ತಲೂ ರೇಖಾವಿನ್ಯಾಸ**

ಸ್ಥಾನಮಾನ ಇಲ್ಲದೆಯೂ ಹಾಸುಹೊಕ್ಕಾಗಿತ್ತು. ಜೀವನವನ್ನು ಸುಂದರಗೊಳಿಸುವ, ಆಸಕ್ತಿ ದಾಯಕಗೊಳಿಸುವ ಮನುಷ್ಯ ಪ್ರಯತ್ನದ ಫಲವಾಗಿ ಕಲೆ ಊರ್ಜಿತಗೊಳ್ಳುತ್ತಾ ಹೋದಂತೆ, ಪ್ರಾದೇಶಿಕ ಶೈಲಿ, ಲಕ್ಷಣಗಳ ಗುರುತಿಸುವಿಕೆಯನ್ನು ಪಡೆದುಕೊಳ್ಳತೊಡಗಿತು. ಉದಾಹರಣೆಗೆ ರಂಗೋಲಿ.

ತುಳುನಾಡಿನಲ್ಲಿ ರಂಗೋಲಿಯನ್ನು ಮಂಡಲಗಳ ರೂಪದಲ್ಲಿ ಕಾಣಬಹುದು. 'ಮಂಡಲ' ಎಂದರೆ ರೇಖೆಗಳ ಪರಿಷ್ಕೃತ ರೂಪ. ಆಶ್ಲೇಷ ಬಲಿ, ಸರ್ಪ ಬಲಿ, ವಾಸ್ತುಮಂಡಲ, ತನುಮಂಡಲ, ದುರ್ಗಾ ಮಂಡಲ, ಶಕ್ತಿಮಂಡಲ, ಚಕ್ರಾಬ್ಜ ಮಂಡಲ, ಶಕ್ತಿದಂಡಕ ಮಂಡಲ, ನವಗ್ರಹಮಂಡಲ, ನಾಗಮಂಡಲ ಮೊದಲಾದ ಆಚರಣೆಗಳಲ್ಲಿ ವಿವಿಧ ಬಗೆಯ ಮಂಡಲಗಳು ಪ್ರಧಾನವಾಗುತ್ತವೆ. ಈ ಮಂಡಲಗಳ ಶೈಲಿಯೂ ಅಷ್ಟೇ ವಿಶಿಷ್ಟವಾದುದು ಮತ್ತು ಒಂದರಿಂದ ಒಂದು ವಿಭಿನ್ನವಾದುದು. ಆದರೆ ಯಾವುದೇ ಮಂಡಲವಾಗಿರಲಿ, ವಿನ್ಯಾಸವೊಂದನ್ನು ಸಿದ್ಧಪಡಿಸಿಕೊಂಡು ಅದಕ್ಕೆ ಬಣ್ಣ ತುಂಬಿದ ಬಳಿಕ ಎರಡು ಬಣ್ಣಗಳನ್ನು ಪ್ರತ್ಯೇಕಗೊಳಿಸಲು ಕಪ್ಪು ಅಥವಾ ಬಿಳಿ ಬಣ್ಣದಿಂದ 'ಜೀವರೇಖೆ'ಯನ್ನು ಬರೆಯುತ್ತಾರೆ. ಇದೇ ಈ ಮಂಡಲಗಳ ಜೀವಾಳ. ಜೀವರೇಖೆಯನ್ನು ಅದರಲ್ಲಿ ಪರಿಣತಿ ಪಡೆದವರು ಮಾತ್ರ ಹಾಕಬಹುದಾಗಿದ್ದು, ಅದನ್ನು ಯಾರು ಬರೆಯುತ್ತಾರೋ ಅವರೇ ಅಲ್ಲಿ

ಪ್ರಧಾನ ವ್ಯಕ್ತಿ ಮಾತ್ರವಲ್ಲ ಅವರಿಗೆ ವಿಶೇಷ ಗೌರವವನ್ನು ನೀಡುತ್ತಾರೆ. ಇದು ಮಂಡಲ ಹಾಕುವ ಪ್ರಕ್ರಿಯೆಯ ಕೊನೆಯ ಹಂತ. ಒಮ್ಮೆ ಜೀವರೇಖೆ ಬರೆದು ಮುಗಿಯಿತೆಂದರೆ ಮಂಡಲ ಮುಕ್ತಾಯ ವಾಯಿತೆಂದು ಅರ್ಥ. ಜೀವರೇಖೆಯ ಅಂತಿಮ ಸ್ಪರ್ಶ ಸಿಗುತ್ತಲೇ ಮಂಡಲಕ್ಕೆ ಪವಿತ್ರವಾದ ಪೂಜನೀಯ ಭಕ್ತಿಭಾವ ತುಂಬುತ್ತದೆ. ಅಲ್ಲಿಂದ ಮುಂದೆ ಧಾರ್ಮಿಕ ವಿಧಿ ಪ್ರಾರಂಭಗೊಳ್ಳುತ್ತದೆ.

ನಾಗಮಂಡಲಕ್ಕೆ ಮಂಡಲ ಹಾಕುವ ಕಸುಬನ್ನು ಮಾಡುವ ಒಂದು ಜನಾಂಗವೇ ತುಳುನಾಡಿನಲ್ಲಿ ಇದೆ. ಇವರನ್ನು 'ವೈದ್ಯ'ರು ಎನ್ನುತ್ತಾರೆ. ಮಂಡಲ ಹಾಕುವುದು ವೈದ್ಯರ ಕುಲ ಕಸುಬು. ಕೇರಳ ದಲ್ಲಿಯೂ ಇದೇ ಬಗೆಯ ಆಚರಣೆ ಇದ್ದು, ಅಲ್ಲಿ ಮಂಡಲ ಹಾಕುವ ಜನಾಂಗ ದವರನ್ನು 'ಪುಲ್ಲವ'ರೆಂದು ಕರೆಯುತ್ತಾರೆ. ನಾಗಮಂಡಲದಲ್ಲಿ ಮಂಡಲ ರಚಿಸುವ ಮುನ್ನ ನಾಗಮಂಡಲ ಮಾಡಿಸುವ ಯಜಮಾನನು ಊರಿನವರ ಸಮ್ಮುಖದಲ್ಲಿ ಪ್ರಾರ್ಥನೆಯನ್ನು ಮಾಡಿ ಮಂಡಲ ರಚಿಸುವ ಜವಾಬ್ದಾರಿಯನ್ನು 'ವೈದ್ಯ'ರಿಗೆ ನೀಡುತ್ತಾರೆ. 'ವೈದ್ಯ'ರು ದೇವತಾ ಪ್ರಾರ್ಥನೆಯನ್ನು ಮಾಡಿ ರೇಖೆಯನ್ನು ಪ್ರಾರಂಭಿಸುತ್ತಾ ಮೊದಲಿಗೆ 'ಶ್ರೀ' ಎಂದು ಬರೆದು 'ಗುರು ಗಣಪತಿ' ಮಂಡಲವನ್ನು ರಚಿಸುತ್ತಾರೆ. ತದನಂತರ ನಾಗಮಂಡಲ ರಚನೆಯ ಪ್ರಕ್ರಿಯೆ ಜರಗುತ್ತದೆ. ಮೊದಲಿಗೆ ರೇಖೆಯನ್ನು ಹಾಕಿ ಅದಕ್ಕೆ ಹಳದಿ ಬಣ್ಣವನ್ನು ತುಂಬುತ್ತಾರೆ. ಮಂಡಲದ ಸೌಂದರ್ಯವನ್ನು ಹೆಚ್ಚಿಸಲು ಕೆಂಪು



ನಾಗಮಂಡಲಕ್ಕೆ ಸಂಬಂಧಪಟ್ಟಂತೆ ಮಂಡಲಗಳಲ್ಲಿ ರೇಖೆಗಳ ಬಳಕೆ



ನಾಗಮಂಡಲಕ್ಕೆ ಸಂಬಂಧಪಟ್ಟಂತೆ ಮಂಡಲಗಳಲ್ಲಿ ರೇಖೆಗಳ ಬಳಕೆ

ಮತ್ತು ಕಪ್ಪು ಬಣ್ಣದ ರೇಖೆಗಳನ್ನು ಹಾಕುತ್ತಾ ಬಿಳಿ ಬಣ್ಣದ ಜೀವರೇಖೆಯನ್ನು ಬರೆದು ಮಂಡಲವನ್ನು ಮುಕ್ತಾಯಗೊಳಿಸುತ್ತಾರೆ. ಇಲ್ಲಿ ಕಪ್ಪು, ಬಿಳಿ, ಕೆಂಪು ಬಣ್ಣಗಳ ವಿಶಿಷ್ಟ ರೇಖಾವಿನ್ಯಾಸವನ್ನು ಗಮನಿಸಬಹುದು.

ಮಂಡಲ ಪೂರ್ಣಗೊಂಡ ನಂತರ ಅದಕ್ಕೆ ಹೂವಿನಿಂದ ಅಲಂಕಾರ ಮಾಡಿ ಅದು ಪೂಜೆಗೊಳ್ಳುತ್ತದೆ. ಪೂಜೆಯ ಬಳಿಕ ಈ ಜೀವರೇಖೆಯನ್ನು ಅಳಿಸುವ ಪೂಜಾವಿಧಿಯೇ ಇದೆ. ಜೀವರೇಖೆ ಅಳಿಸುವ ಪ್ರಕ್ರಿಯೆಯೊಂದಿಗೆ ನಾಗಮಂಡಲ ಸಮಾಪ್ತಿಗೊಳ್ಳುತ್ತದೆ. ಇದೇ ರೀತಿ ತನುಮಂಡಲದಲ್ಲಿಯೂ ರಚಿಸಲಾಗಿರುವ ಸರ್ಪಗಳ ಸುಂದರ ರೇಖಾಚಿತ್ರಗಳನ್ನು ಹಾಲನ್ನು ವಿಶಿಷ್ಟ ರೀತಿಯಲ್ಲಿ ಅವುಗಳ ಮೇಲೆ ಚೆಲ್ಲುವ ಮೂಲಕ ಮಂಡಲ ವಿಸರ್ಜನೆಯನ್ನು ಮಾಡುತ್ತಾರೆ. ನವಗ್ರಹ ಪೂಜೆಯಲ್ಲಿ ಕೂಡಾ ನವಗ್ರಹಗಳ ರೇಖಾಚಿತ್ರ (ಸಾಂಕೇತಿಕ ರೇಖಾಚಿತ್ರ)ಗಳನ್ನು ಮಂಡಲದಲ್ಲಿ ಬರೆಯುತ್ತಾರೆ. ಇದೇ ರೀತಿ ಬೇರೆ ಬೇರೆ ಪೂಜಾವಿಧಿಗಳಲ್ಲಿ ಆಯಾ ದೇವದೇವತೆಯರ ರೇಖಾಚಿತ್ರಗಳನ್ನು ಮಂಡಲದಲ್ಲಿ ಬರೆಯುವುದನ್ನು ಕಾಣಬಹುದು. ಬಹುಶಃ ಕಲೆಯ ಒಟ್ಟು ಇತಿಹಾಸವನ್ನು ತೆರೆದು ನೋಡಿದರೆ ಈ ಬಗೆಯಲ್ಲಿ ರೇಖೆಗಳಿಗೆ ಪವಿತ್ರ ಪೂಜ್ಯ ಭಾವ ಇನ್ನೆಲ್ಲೂ ಸಿಗಲಿಕ್ಕಿಲ್ಲ. ಇದು ತುಳುನಾಡಿನ ವೈಶಿಷ್ಟ್ಯ. ತುಳುನಾಡಿನಲ್ಲಿ ಗೋಡೆಗಳ ಮೇಲೆ ರೇಖಾಚಿತ್ರಗಳು ತೀರಾ ಕಡಿಮೆಯಾದರೂ ಧಾರ್ಮಿಕ ಆಚರಣೆಗಳಲ್ಲಿ ರೇಖಾಚಿತ್ರವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

## ಭೌತಿಕ ಸಂಸ್ಕೃತಿಯಲ್ಲಿ ರೇಖಾವೈವಿಧ್ಯ

ಯಾವುದೇ ಆರಾಧನೆ, ಸಂಪ್ರದಾಯ, ಪದ್ಧತಿಗಳಿರಲಿ ಅವೆಲ್ಲವುಗಳ ಜೊತೆಗೆ ಸಾಂಪ್ರದಾಯಿಕ ಪರಿಕರಗಳಿರುತ್ತವೆ. ಪರಿಕರಗಳಿಲ್ಲದೆ ಇವುಗಳಿಗೆ ಅಸ್ತಿತ್ವವಿಲ್ಲ. ತುಳುನಾಡಿನ ಜನಪದ ಆಚರಣೆಗಳಲ್ಲಿ ಭೂತಾರಾಧನೆಯು ಅತ್ಯಂತ ವಿಶಿಷ್ಟವಾಗಿದೆ. ಇದರಲ್ಲಿ ಬಳಸಲಾಗುವ ಲೋಹದ ಪರಿಕರಗಳಾದ ವಿವಿಧ ಬಗೆಯ ಆರತಿಗಳು, ಗಿಂಡಿ, ಗಂಟೆ, ಖಡ್ಗ, ಭೂತದ ಮುಖವಾಡ, ಭೂತದ ಆಭರಣಗಳು, ತತ್ರ, ಚಾಮರ, ಮರದಿಂದ ರೂಪಿಸಲಾಗುವ ಮಂಚ (ಭೂತದ ಪೀಠ), ಉಯ್ಯಾಲೆ ಮೊದಲಾದವುಗಳಲ್ಲಿ ವಿವಿಧ ಶೈಲಿಯ ರೇಖಾಚಿತ್ರಗಳನ್ನು ಕಾಣಬಹುದು. ಭೂತಾರಾಧನೆಯಲ್ಲಿ ಮುಖವಾಡದ ಸ್ಥಾನ ಮಹತ್ವದ್ದು. ವಿವಿಧ ದೈವಗಳಿಗೆ ಅವರ ರೂಪಲಕ್ಷಣಗಳಿಗೆ ಹೊಂದುವಂತಹ ವಿನ್ಯಾಸದ ಮುಖವಾಡಗಳನ್ನು ರೂಪಿಸುತ್ತಾರೆ. ಹಿಂದಿನ ಕಾಲದಲ್ಲಿ ಈ ಮುಖವಾಡಗಳನ್ನು ಅಡಿಕೆ ಹಾಳೆಯಲ್ಲಿ ತಯಾರಿಸುತ್ತಿದ್ದರು. ಕ್ರಮೇಣ ಲೋಹದ ಮುಖವಾಡಗಳು ಬಳಕೆಗೆ ಬಂದವು. ಉದಾಹರಣೆಗೆ, ವರ್ತೆ, ಪಂಜುರ್ಲಿ, ಧೂಮಾವತಿ, ಕಲ್ಕುಡ, ಕಲ್ಲುರ್ಟಿ, ಮೈಸಂದಾಯ, ಜಾರಂದಾಯ, ಪಿಲಿಚಾಮುಂಡಿ, ಮಲೆರಾಯ, ಬಬ್ಬರ್ಯ, ಬಬ್ಬುಸ್ವಾಮಿ –ಈ ಎಲ್ಲ ದೈವಗಳ ಮುಖವಾಡಗಳು ತಮ್ಮ ವೈವಿಧ್ಯಮಯ ರೇಖಾ ವಿನ್ಯಾಸದಿಂದ ಒಂದಕ್ಕೊಂದು ಭಿನ್ನವಾಗಿರುತ್ತವೆ. ಮಾತ್ರವಲ್ಲ, ಈ ರೇಖೆಗಳು ದೈವದ ಸ್ವಭಾವಕ್ಕೆ ಅನುಗುಣವಾದ ಭಾವವನ್ನು ಆ ಮುಖವಾಡಗಳಿಗೆ ನೀಡುತ್ತವೆ.



ನಾಗಮಂಡಲಕ್ಕೆ ಸಂಬಂಧಪಟ್ಟಂತೆ ಮಂಡಲಗಳಲ್ಲಿ ರೇಖೆಗಳ ಬಳಕೆ



ಮುಖವಾಡಗಳಲ್ಲಿ ರೇಖಾ ವೈಭವ

ದೈವಾರಾಧನೆಯಲ್ಲಿ ಮರದ ಮೂರ್ತಿಯನ್ನು ಆರಾಧಿಸುವ ಸಂಪ್ರದಾಯವೂ ತುಳುನಾಡಿ ನಲ್ಲಿದೆ. ಈ ಮೂರ್ತಿಗಳನ್ನು ವಿವಿಧ ಗಾತ್ರಗಳಲ್ಲಿ ರಚಿಸುತ್ತಾರೆ. ಇವುಗಳಿಗೆ ಇಲ್ಲಿ 'ಉರು' ಅಥವಾ 'ಉರ' ಎಂಬ ಹೆಸರು ಪ್ರಚಲಿತದಲ್ಲಿದೆ. ತುಳುನಾಡಿನ ನಂದಳಿಕೆ, ಮೆಕ್ಕಿಕಟ್ಟೆ, ಕವತ್ತಾರು, ಹಿರಿಯಡ್ಕ, ತಂತ್ರಾಡಿ ಹೀಗೆ ವಿವಿಧ ಗರಡಿಗಳಲ್ಲಿ ಇಂಥ ಉರುಗಳನ್ನು ಕಾಣಬಹುದು. ಈ ಮೂರ್ತಿಗಳನ್ನು ಹಲಸು ಅಥವಾ ಹೆಬ್ಬಲಸಿನ ಮರಗಳಿಂದಲೇ ರಚಿಸುವುದು ನಿಯಮ. ಉರುಗಳಲ್ಲಿ ತಲೆಕೂದಲು, ತಲೆಮಣಿ, ವಸ್ತ್ರವಿನ್ಯಾಸ, ಆಭರಣ, ಕಿವಿಯೋಲೆ, ಸೊಂಟಪಟ್ಟಿ, ತೋಳ್ಬಟ್ಟಿ, ಗೆಜ್ಜೆಚಲ್ಲಣ, ಕಾಲ್ಕಡಗ ಮುಂತಾದ



'ಉರ'ಗಳಲ್ಲಿ ರೇಖೆಗಳ ಬಳಕೆ

ವಿಭಿನ್ನ ವಿನ್ಯಾಸಗಳನ್ನು ಮರದ ಮೇಲೆ ರೇಖೆಗಳಲ್ಲಿಯೇ ಕೆತ್ತಿ ತೋರುವ ಕಲೆ ಗಮನಾರ್ಹ. ಕೋಟಿಚೆನ್ನಯರು, ಅಬ್ಬಗದಾರಗ, ಕಾಂತಾಬಾರೆ-ಬುದಬಾರೆ, ಸೊನ್ನೆ-ಗಿಂಡೆ, ಪಂಜುರ್ಲಿ, ಜಾರಂದಾಯ ಬಂಡಿ, ನಂದಿಕೋಣ ಮಾತ್ರವಲ್ಲದೆ, ರಾಜಮನೆತನದ ಹಿರಿಯರ ಶಿಲ್ಪಗಳನ್ನು ಕೂಡಾ ಮಾಡುವ ಸಂಪ್ರದಾಯವಿದೆ. ಕಲ್ಲಿನ ಶಿಲ್ಪಗಳಲ್ಲಿಯೂ ಇದೇ ಬಗೆಯ ವಿನ್ಯಾಸಗಳನ್ನು ಕಾಣಬಹುದು.

ತುಳುನಾಡಿನ ದೇಗುಲಗಳಲ್ಲಿ ರಥೋತ್ಸವ ಬಹಳ ಪ್ರಮುಖವಾದುದು. ಇಲ್ಲಿನ ದೇಗುಲಗಳಲ್ಲಿ ದಾರುಶಿಲ್ಪ ವೈಭವ ಬೇರೆಲ್ಲೂ ಕಾಣಸಿಗದಷ್ಟು ಅದ್ಭುತವಾಗಿದೆ. ರಾಮಾಯಣ, ಮಹಾಭಾರತ, ಭಾಗವತ ಮತ್ತು ಪುರಾಣಗಳಿಗೆ ಸಂಬಂಧಪಟ್ಟ ರೇಖಾಚಿತ್ರಗಳಿಂದ ಮರದ ರಥಗಳನ್ನು ಅಲಂಕರಿಸುವುದು ಸಂಪ್ರದಾಯ. ರಥಗಳಲ್ಲಿ ದೇವರ ಸಾಂಪ್ರದಾಯಿಕ ಚಿತ್ರಕಲಾಕೃತಿಗಳನ್ನು ಕೂಡಾ ಅಳವಡಿಸುತ್ತಾರೆ. ಈ ಚಿತ್ರಕಲಾಕೃತಿಗಳೂ ಸಾಂಪ್ರದಾಯಿಕ ರೇಖಾಚಿತ್ರಗಳೇ ಆಗಿರುತ್ತವೆ.



'ಉರ'ಗಳಲ್ಲಿ ರೇಖೆಗಳ ಬಳಕೆ



ಯಕ್ಷಗಾನದಲ್ಲಿ ಮುಖವರ್ಣಿಕೆ

## ಪ್ರದರ್ಶನ ಕಲೆಗಳಲ್ಲಿ ರೇಖೆಯ ಮಹತ್ವ

ಕರಾವಳಿಯ ಭಾಗದಲ್ಲಿ ಭೂತಾರಾಧನೆ, ಯಕ್ಷಗಾನ, ಕಂಗೀಲು ಕುಣಿತ, ಆಟಿ ಕಳಂಜ, ಹುಲಿವೇಷ ಮುಂತಾದ ವಿವಿಧ ಪ್ರದರ್ಶನ ಕಲೆಗಳಿವೆ. ಭೂತಕೋಲದಲ್ಲಿ ಆಯಾ ದೈವಕ್ಕೆ ಸಂಬಂಧ ಪಟ್ಟ ರೂಪ, ಸ್ವಭಾವ, ಗುಣಲಕ್ಷಣಗಳಿಗನುಗುಣವಾಗಿ ರೇಖೆಗಳನ್ನು ಮುಖದ ಮೇಲೆ, ದೇಹದ ಮೇಲೆ ಬಣ್ಣಗಳಿಂದ ಚಿತ್ರಿಸುಕೊಳ್ಳುತ್ತಾರೆ. ಈ ಚಿತ್ರಿಸುವ ಪ್ರಕ್ರಿಯೆಯಲ್ಲೂ ಧಾರ್ಮಿಕ ವಿಧಿಗಳನ್ನು ಕಾಣಬಹುದು. ಯಕ್ಷಗಾನ ಕಲೆಯಲ್ಲಿ ಪಾತ್ರಗಳಿಗನುಗುಣವಾಗಿ ರಾಜವೇಷ, ಸ್ತ್ರೀವೇಷ, ರಾಕ್ಷಸ

ವೇಷ, ಹಾವಿನ ವೇಷ, ಮಾಯಾವಿಗಳು, ಯಕ್ಷರು, ವಿವಿಧ ಪ್ರಾಣಿಗಳ ರೂಪಗಳನ್ನು ಮುಖದ ಮೇಲೆ ರೇಖೆಗಳಿಂದಲೇ ತೋರುವ ಪರಿ ಗಮನಾರ್ಹ. ಮುಖದ ಮೇಲೆ ಬಿಡಿಸುವ ರೇಖೆ ಹಾಗೂ ಸುಳಿಗಳ ವಿನ್ಯಾಸದಿಂದಲೇ ರಾವಣ, ಕುಂಭಕರ್ಣ, ವಿಭೀಷಣ, ಭೀಮ, ಹನುಮಂತ ಮೊದಲಾದ ಪಾತ್ರಗಳನ್ನು ಗುರುತಿಸಬಹುದು.

## ಕಾವಿಕಲೆಯಲ್ಲಿ ರೇಖೆಗಳು

ಗೋಡೆಯ ಮೇಲೆ ಸುಣ್ಣದ ಗಾರೆ ಮಾಡಿ, ನೈಸರ್ಗಿಕವಾಗಿ ದೊರುಕುವ ಕಾವಿಯನ್ನು ಅರೆದು, ಆ ಗಾರೆಯ ಮೇಲೆ ಹಚ್ಚುವುದು. ಆ ಬಳಿಕ ಅದು ಹಸಿಯಿರುವಾಗಲೇ ಅದರ ಮೇಲೆ ಬೇಕಾದ ಚಿತ್ರಗಳನ್ನು ರಚಿಸಿ, ಚಿತ್ರದ ರೇಖೆಗಳ ಮೇಲಿನ ಕಾವಿಯನ್ನು ಕೆರೆದು ತೆಗೆದಾಗ, ಬಿಳಿ ಮತ್ತು ಕಾವಿ ಬಣ್ಣಗಳ ವಿನ್ಯಾಸ ಸೃಷ್ಟಿಯಾಗುತ್ತದೆ. ಕರಾವಳಿಯ ಈ ಜಾನಪದ, ಸಾಂಪ್ರದಾಯಿಕ ಕಲೆ ಬಹಳ ಅಪರೂಪವಾಗಿದ್ದು, ಈಗ ಅಳಿವಿನಂಚಿನಲ್ಲಿದೆ. ಇದರಲ್ಲಿ ಹೂವಿನ ಬಳ್ಳಿಗಳ ವಿನ್ಯಾಸ, ತೋರಣದ ವಿನ್ಯಾಸ ಇವೆಲ್ಲ ನಿರ್ದಿಷ್ಟ ಶೈಲಿಯಲ್ಲಿದ್ದು, ತಲೆತಲಾಂತರಗಳಿಂದ ಕಟ್ಟುನಿಟ್ಟಾಗಿ ಪಾಲನೆಗೊಂಡು ಬಂದಿವೆ. ದಶಾವತಾರ, ನವಗ್ರಹ, ಸಪ್ತಮಾತೃಕೆಯರು ಸೇರಿದಂತೆ ಹಲವಾರು ದೇವತೆಗಳ ಚಿತ್ರಗಳನ್ನು ದೇವಾಲಯಗಳ ಗೋಡೆಗಳ ಮೇಲೆ ರೂಪಿಸುವುದು ಇಲ್ಲಿನ ಸಂಪ್ರದಾಯವಾಗಿತ್ತು. ಈಗಲೂ ಕೊಲ್ಲೂರಿನ ಶ್ರೀ ಮೂಕಾಂಬಿಕಾ ದೇವಾಲಯ, ಕುಂದಾಪುರದ ವೆಂಕಟರಮಣ ದೇವಾಲಯ ಸೇರಿದಂತೆ ಈ ಭಾಗದ ಕೆಲವು ದೇವಾಲಯಗಳಲ್ಲಿ ಕಾಣಲು ಸಿಗುತ್ತದೆ.




ಕೇರಳದ 'ಥೈಯ್ಯಂ'ನಲ್ಲಿ ಮುಖವರ್ಣಿಕೆ

